# ವರದಕ್ಷಿಣೆ - ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಮಾಸ್ಟರ್ ಆಫ್ ಫಿಲಾಸಫಿ (ಎಂ. ಫಿಲ್)
ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕರು
ಸುರೇಶಗೌಡ ಹೆಚ್

ಮಾರ್ಗದರ್ಶಕರು
ಡಾ. ಶೈಲಜ ಇಂ. ಹಿರೇಮಠ
ಪ್ರವಾಚಕರು
ಮಹಿಳಾ ಅಧ್ಯಯನ ವಿಭಾಗ



ಭಾಷಾನಿಕಾಯ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೭

# ವರದಕ್ಷಿಣೆ – ಒಂದು ಅಧ್ಯಯನ

(ಕನ್ನಡ ವಿಶ್ವವಿದ್ಯಾಲಯಕ್ಕೆ ಮಾಸ್ಟರ್ ಆಫ್ ಫಿಲಾಸಫಿ (ಎಂ.ಫಿಲ್)
ಪದವಿಗಾಗಿ ಸಲ್ಲಿಸುತ್ತಿರುವ ಸಂಪ್ರಬಂಧ)

ಸಂಶೋಧಕ

**ಸುರೇಶಗೌಡ. ಹೆಚ್**



ಮಾರ್ಗದರ್ಶಕರು

**ಡಾ. ಶೈಲಜ ಇಂ. ಹಿರೇಮಠ**

ಪ್ರವಾಚಕರು

ಮಹಿಳಾ ಅಧ್ಯಯನ ವಿಭಾಗ



**ಭಾಷಾನಿಕಾಯ**

ಮಹಿಳಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ – ೫೮೩ ೨೭೬

೨೦೦೭

# ಪ್ರಮಾಣ ಪತ್ರ

**ವರದಕ್ಷಿಣೆ- ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ಡಾ. ಶೈಲಜ ಇಂ. ಹಿರೇಮಠ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದೇನೆ. ಹಂಪಿ, ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್ ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಸಂಪ್ರಬಂಧವನ್ನು ಈ ಮೊದಲು ಯಾವುದೇ ಪದವಿಗಾಗಲಿ ಅಥವಾ ಇತರ ಉದ್ದೇಶಗಳಿಗಾಗಲಿ ಬಳಸಿಕೊಂಡಿಲ್ಲ ಎಂದು ಈ ಮೂಲಕ ಪ್ರಮಾಣಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ
ದಿನಾಂಕ: ೩೦/೦೭/೦೭

(ಸುರೇಶಗೌಡ. ಹೆಚ್)
ಸಂಶೋಧನಾ ವಿದ್ಯಾರ್ಥಿ
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ,
ವಿದ್ಯಾರಣ್ಯ ೫೮೩೨೭೬

# ದೃಢೀಕರಣ ಪತ್ರ

ಶ್ರೀ ಸುರೇಶಗೌಡ. ಹೆಚ್ ಇವರು **ವರದಕ್ಷಿಣೆ- ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಈ ಸಂಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ.

ಎಂ.ಫಿಲ್ ಪದವಿಗಾಗಿ ಕನ್ನಡವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಪ್ರಸ್ತುತ ಸಂಪ್ರಬಂಧದ ಯಾವುದೇ ಭಾಗವನ್ನು ಇವರು ಈ ಮೊದಲು ಯಾವುದೇ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

**(ಡಾ॥ ಶೈಲಜ ಇಂ. ಹಿರೇಮಠ)**
ಮುಖ್ಯಸ್ಥರು ಮತ್ತು ಮಾರ್ಗದರ್ಶಕರು
ಮಹಿಳಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩೨೭೬

ಸ್ಥಳ : ವಿದ್ಯಾರಣ್ಯ
ದಿನಾಂಕ: 30/07/07

# ಪರಿವಿಡಿ

ವಿವಾಹ ಸಂಸ್ಥೆ ಸೃಷ್ಟಿಸುವ ಅನೇಕ ಸಮಸ್ಯೆಗಳಲ್ಲಿ ವರದಕ್ಷಿಣೆಯು ಒಂದು. ಇದು ಸಮಕಾಲಿನ ಸಮಾಜದ ಸಾಮಾಜಿಕ ಸಮಸ್ಯೆಯ ಅಷ್ಟೇ ಆಗಿರದೆ, ಸಾಮಾಜಿಕ ಚಳುವಳಿಕಾರರ ಮತ್ತು ವಿವಿಧ ಜ್ಞಾನ ಶಾಖೆಯ ಅಧ್ಯಯನಕಾರರ ಅಧ್ಯಯನದ ವಿಷಯವು ಸಹ ಆಗಿದೆ. ಹಾಗಾಗಿ ಸಾಮಾಜಿಕ ಸಂಸ್ಥೆಯಿಂದ ಉದ್ಭವಗೊಂಡ ಈ ಸಮಸ್ಯೆಯನ್ನು ಚಳುವಳಿ/ ಅಧ್ಯಯನಕಾರರು ೭೦ರ ದಶಕದ ತನಕ ಈ ಸಮಸ್ಯೆಗಿರುವ ಕಾರಣ ಹುಡುಕುತ್ತಾ, ವಿವರಣೆ ನೀಡಿ, ವರದಕ್ಷಿಣೆಯನ್ನು ವಿರೋಧಿಸಲು ಬಯಸಿದರು ಮತ್ತು ಈ ನೆಲೆಯಲ್ಲಿ ಪ್ರಯತ್ನಿಸಿದರು ಕೂಡಾ.

ಆದರೆ ೧೯೭೦ ದಶಕದ ನಂತರದ ಜ್ಞಾನಶಾಖೆಗಳಲ್ಲಿ ಉಂಟಾದ 'ಲಿಂಗಸೂಕ್ಷ್ಮ' ತಿಳುವಳಿಕೆಯ ಪರಿಣಾಮದಿಂದ ಮಹಿಳೆಯ ಸಾಮಾಜಿಕ ಸಮಸ್ಯೆಗಳಿಗೆ ಕಾರಣಗಳು ಹುಡುಕುವುದರ ಜೊತೆ ಅದಕ್ಕೆ ಕಾರಣವಾದ ಚಿಂತನೆ ಗುರುತಿಸುವ ಕೆಲಸ ಆರಂಭವಾಯಿತು. ಈ ಹಿನ್ನೆಲೆಯಿಂದ ಸಮಾಜದಲ್ಲಿ ಮಹಿಳೆಯರು ಅನುಭವಿಸುತ್ತಿರುವ ಹಲವು ಸಮಸ್ಯೆಗಳಿಗೆ ಪಿತೃಪ್ರಧಾನತೆ ಕಾರಣವೆಂಬ ಸತ್ಯವನ್ನು ಹಲವು ವಿದ್ವಾಂಸರು ತಮ್ಮ ಅಧ್ಯಯನದ ಮೂಲಕ ಕಂಡುಕೊಂಡರು. ಈ ತಿಳುವಳಿಕೆಯು ಸಾಮಾಜಿಕ ವಿಜ್ಞಾನದ ಪ್ರತಿಯೊಂದು ವಿಷಯದ ಮರು ಅಧ್ಯಯನಕ್ಕೆ ಒಳಪಡಿಸುವ ಅಗತ್ಯತೆಯನ್ನು ತೋರಿಸಿತು. ಈ ಹಿನ್ನೆಲೆಯಿಂದ ಪ್ರಸ್ತುತ ಅಧ್ಯಯನವು ನಡೆಯುತ್ತಿದೆ. ಹಾಗಾಗಿ ಈ ಅಧ್ಯಯನವು ವರದಕ್ಷಿಣೆಗೆ ಇರುವ ಕಾರಣಗಳನ್ನು ಅಷ್ಟೇ ನೋಡದೆ ಅದರ ಹಿಂದಿನ ಚಿಂತನಾ ಕ್ರಮವನ್ನು ಪರಿಶೀಲಿಸುತ್ತದೆ. ಆ ಮೂಲಕ ವರದಕ್ಷಿಣೆ ಸಮಸ್ಯೆಯನ್ನು ಭಿನ್ನ ನೆಲೆಯಲ್ಲಿ ನೋಡುವ ಪ್ರಯತ್ನ ಮಾಡಲಾಗಿದೆ.

ಕುಟುಂಬ, ವಿವಾಹ ಸಂಸ್ಥೆಗಳಿಂದ ಮಹಿಳಾ ಸಮುದಾಯ ಎದುರಿಸುತ್ತಿರುವ ಅನೇಕ ಸಮಸ್ಯೆಗಳಲ್ಲಿ ವರದಕ್ಷಿಣೆ ಬಹಳ ಮುಖ್ಯವಾದ ಸ್ಥಾನ ಪಡೆದಿದೆ. ಈ ಅಧ್ಯಯನದ ಭಾಗವಾಗಿ ಪತ್ರಿಕೆ, ಟಿ.ವಿ. ಚಾನಲ್‌ಗಳನ್ನು ನೋಡುವುದಾದರೆ, ವರದಕ್ಷಿಣೆ ಪ್ರಕರಣಗಳು ಇಂದು ಅಧಿಕವಾಗುತ್ತಿವೆ. ಇದಕ್ಕೆ ಹಲವು ಕಾರಣಗಳಿವೆ. ಆದರೆ ಇದು ಮೂಲತಃ ವಿವಾಹ ಸಂದರ್ಭದಲ್ಲಿ ಉಂಟಾಗುವ ಸಮಸ್ಯೆ ಆಗಿದ್ದು ವಿವಾಹ ನಂತರವು ಮುಂದುವರೆಯುತ್ತದೆ. ಆದರೆ

ಈ ಸಮಸ್ಯೆಯ ಸ್ವರೂಪ ಕಾಲ, ದೇಶ, ಸಮಯ, ವರ್ಗಕ್ಕೆ/ಪ್ರದೇಶ ತಕ್ಕಂತೆ ಭಿನ್ನವಾಗಿದೆ, ತೀವ್ರವಾಗಿದೆ. ಈ ಅಧ್ಯಯನವು ತನ್ನ ಮಿತಿಯಲ್ಲಿ ವರದಕ್ಷಿಣೆ ಸ್ವರೂಪವನ್ನು ಗುರುತಿಸಲು ಪ್ರಯತ್ನಿಸುತ್ತದೆ.

Dowry ಎನ್ನುವ ಇಂಗ್ಲೀಷ್ ಪದಕ್ಕೆ ಸಮನಾರ್ಥವಾಗಿ ಕನ್ನಡದ ವರದಕ್ಷಿಣೆ ಎನ್ನುವ ಪದವನ್ನು ಬಳಸಲಾಗುತ್ತದೆ. Dowry ಎಂದರೆ, ಮದುವೆಯ ಬಳುವಳಿ ಎಂದರ್ಥ. ಕನ್ನಡದಲ್ಲಿ ವರದಕ್ಷಿಣೆ ಎಂದರೆ ಮದುವೆಯಲ್ಲಿ ಹೆಣ್ಣಿನ ತಂದೆಯು ವರನಿಗೆ ಕೊಡುವ ಹಣ, ಒಡವೆ ವಸ್ತು ಇತ್ಯಾದಿ ಎಂಬ ಅರ್ಥವನ್ನು ಈ ಪದ ನೀಡುತ್ತದೆ. ಈ ಕುರಿತು ಅಧ್ಯಯನ ಮಾಡಿದ ವಿವಿಧ ಅಧ್ಯಯನಕಾರರು ಈ ಕೆಳಗಿನಂತೆ ವ್ಯಾಖ್ಯಾನಿಸಿದ್ದಾರೆ.
ಅವುಗಳೆಂದರೆ:-

**ಎನ್‌ಸೈಕ್ಲೋಪೀಡಿಯಾ ಆಫ್ ಬ್ರಿಟಾನಿಕಾ** ಪ್ರಕಾರ: "ವಿವಾಹ ಸಂದರ್ಭದಲ್ಲಿ ಸ್ತ್ರಿಯೊಬ್ಬಳಿಗೆ ಹಾಗೂ ಆಕೆಯ ಪತಿಗೆ ಕೊಡುವ ಆಸ್ತಿಯೇ ವರದಕ್ಷಿಣೆ".

**ಮಾರ್ಕ್ಸ್‌ರ್‍ಯಾಡಿನ್** ಪ್ರಕಾರ:- "ವ್ಯಕ್ತಿಯೋರ್ವನು ತನ್ನ ವಿವಾಹದ ಸಂದರ್ಭದಲ್ಲಿ ತನ್ನ ಹೆಂಡತಿಯ ಹಾಗೂ ಆಕೆಯ ಕುಟುಂಬದವರಿಂದ ಪಡೆದುಕೊಳ್ಳುವ ಆಸ್ತಿಯೇ ವರದಕ್ಷಿಣೆ" ಎಂದಿದ್ದಾರೆ. ಒಟ್ಟಿನಲ್ಲಿ "ವಿವಾಹದ ಸಂದರ್ಭದಲ್ಲಿ ಒಡವೆ, ಹಣ, ಆಸ್ತಿ, ವಾಹನ, ಭದ್ರತಾ ಪತ್ರಗಳ ರೂಪದಲ್ಲಿ ವರ ಮತ್ತು ಆತನ ಮನೆಯವರು ವಧು ಹಾಗೂ ವಧುವಿನ ಮಾತಾ-ಪಿತೃಗಳು ನೀಡಬೇಕಾದ ಉಡುಗೊರೆಗಳನ್ನು ವರದಕ್ಷಿಣೆ" (ಪೂರ್ವಾಚಾರ್.ಎಂ:೨೦೦೦; ಪು.೧೩೬) ಎಂದು ಅಭಿಪ್ರಾಯಪಟ್ಟಿದ್ದಾರೆ.

ವಿವಾಹ ಸಂದರ್ಭದಲ್ಲಿ ಪ್ರತಿಯೊಬ್ಬರ ತಮ್ಮ ಭೌಗೋಳಿಕ ಪರಿಸರದಲ್ಲಿ ಲಭ್ಯವಾಗುವ ಹಣ ಮತ್ತು ಮೌಲ್ಯಯುತ ವಸ್ತುಗಳನ್ನು ಗಂಡನ ಕಡೆಯವರಿಗೆ ಹೆಣ್ಣು ಕಡೆಯವರು ನೀಡುವ ಪ್ರಕ್ರಿಯೆಯೇ ವರದಕ್ಷಿಣೆಯಾಗಿದೆ.

**ಅಧ್ಯಯನ ಸ್ವರೂಪ**

ಪ್ರಸ್ತುತ ಸಮಾಜದ ಎಲ್ಲ ಜಾತಿ, ವರ್ಗಗಳ ಗಡಿಗಳನ್ನು ದಾಟಿ ವ್ಯಾಪಕವಾಗಿ ಬೆಳೆದ ಪಿಡುಗಾಗಿ ಕಾಡುತ್ತಿರುವ ಸಮಸ್ಯೆಗಳಲ್ಲಿ ವರದಕ್ಷಿಣೆಯು ಪ್ರಮುಖವಾದದ್ದು. ಇದು ಇತ್ತೀಚಿನ ವರ್ಷಗಳಲ್ಲಿ ಭಯಾನಕ ರೂಪದಲ್ಲಿ ಬೆಳೆದು ಭಿನ್ನ ಸ್ವರೂಪವನ್ನು ಪಡೆದಿದೆ. ಜೊತೆಗೆ ಮಹಿಳಾ ಸಮುದಾಯದ ಅನೇಕ ಸಮಸ್ಯೆಗಳಿಗೆ ಕಾರಣವಾಗಿದೆ. ಮಹಿಳೆಗೆ ವಿವಾಹವು ಅನಿವಾರ್ಯತೆ

ತಂದು ಒಡ್ಡಿದ ಪಿತೃಚಿಂತನೆ, ಮಹಿಳೆ ವಿವಾಹ ಆಗಬೇಕೆಂದರೆ ವರದಕ್ಷಿಣೆ ನೀಡಲೇಬೇಕು ಎನ್ನುವ ಮತ್ತೊಂದು ಅನಿವಾರ್ಯತೆಯನ್ನು ಸೃಷ್ಟಿಸಿದೆ.

ಈ ಸಮಸ್ಯೆಯ ಭೀಕರತೆ ಎಷ್ಟು ಎಂದು ನಿಖರವಾಗಿ ಅಳೆಯುವುದು ಕಷ್ಟ. ಆದರೆ ವರದಕ್ಷಿಣೆಯ ಸಾವಿನ ಪ್ರಕರಣಗಳು ಈ ಸಮಸ್ಯೆಯ ಒಂದು ಮುಖವನ್ನು ಮಾತ್ರ ಸ್ಪಷ್ಟವಾಗಿ ತೋರಿಸುತ್ತವೆ. ಹಲವು ಪ್ರಕರಣಗಳು ಸಾವಿನೊಂದಿಗೆ ಸಮಾಪ್ತಿಗೊಂಡಿವೆ. ಇನ್ನು ಅನೇಕ ಕಾರಣಕ್ಕಾಗಿಯೇ ಮಹಿಳೆಯರು ಜೀವನ ಪೂರ್ತಿ ಮಾನಸಿಕವಾಗಿ ಮತ್ತು ದೈಹಿಕವಾಗಿ ಹಿಂಸೆಯನ್ನು ಅನುಭವಿಸುತ್ತಿದ್ದಾರೆ. ಇನ್ನು ಕೆಲವು ಮಹಿಳೆಯರು ಹೆಣ್ಣಿನ ತಂದೆ ಮನೆಯ ಮಾನ, ಮರ್ಯಾದೆಗಾಗಿ, ಅಸಹಾಯಕರಾಗಿ ನೋವನ್ನು ನುಂಗಿಕೊಳ್ಳುತ್ತಿದ್ದಾರೆ. ಈ ಸಮಸ್ಯೆ ವಿರುದ್ಧ ಸಾಕಷ್ಟು ಪ್ರಚಾರ, ತಿಳುವಳಿಕೆ ನೀಡಲಾಗಿದ್ದರೂ ಹಾಗೂ ವರದಕ್ಷಿಣೆ ನಿಷೇಧಿಸುವ ಕಾನೂನನ್ನು ಜಾರಿಗೆ ತಂದು ಕಠಿಣ ಶಿಕ್ಷೆಯನ್ನು ನಿಗದಿಪಡಿಸಿದ್ದರೂ, ವರದಕ್ಷಿಣೆಯ ಸಮಸ್ಯೆ ಹಾಗೆಯೇ ಹೆಚ್ಚಾಗುತ್ತಿರುವುದನ್ನು ನೋಡಿದರೆ ಈ ಸಮಸ್ಯೆಯ ಸ್ವರೂಪ/ಬೇರುಗಳನ್ನು ಸ್ಪಷ್ಟವಾಗಿ ಗುರುತಿಸಲಾಗಿಲ್ಲ ಎಂದು ಗೊತ್ತಾಗುತ್ತದೆ. ಈ ಅಧ್ಯಯನವು ಮೂಲತ ವರದಕ್ಷಿಣೆಯ ಸ್ವರೂಪವನ್ನು ಗುರುತಿಸಲು ಪ್ರಯತ್ನಿಸುತ್ತದೆ.

**ಅಧ್ಯಯನದ ಉದ್ದೇಶ**

ವರದಕ್ಷಿಣೆ ಕುರಿತಾದ ಈ ಅಧ್ಯಯನವು ತನ್ನದೆ ಆದ ಉದ್ದೇಶಗಳನ್ನು ಒಳಗೊಂಡಿದೆ.

- ಪ್ರಸ್ತುತ ಸಮಾಜದಲ್ಲಿ ವರದಕ್ಷಿಣೆ ಸ್ವರೂಪ ಮತ್ತು ಅದರ ತೀವ್ರತೆಯನ್ನು ತಿಳಿಯುವುದು.
- ವರದಕ್ಷಿಣೆ ಅಥವಾ ಅವರ ಕುಟುಂಬದ ಹೆಸರಿನಲ್ಲಿ ಮಹಿಳೆಯರ ಮೇಲೆ ನಡೆಯುವ ದೈಹಿಕ, ಮಾನಸಿಕ ಹಿಂಸೆಯನ್ನು ತಿಳಿಯುವುದು.
- ವರದಕ್ಷಿಣೆಯ ಬಗೆಗೆ ಮಹಿಳೆಯರಿಗೆ ಇರುವ ಕಾನೂನು ಸಂಬಂಧಗಳನ್ನು ತಿಳಿಯುವುದರ ಜೊತೆಗೆ ಈ ಕಾಯಿದೆ ವರದಕ್ಷಿಣೆಯನ್ನು ಪರಿಭಾವಿಸಿದ ಬಗೆ ಹಾಗೂ ಒಳಗೊಳ್ಳಬೇಕಾದ ಸಂಗತಿಗಳನ್ನು ಗುರುತಿಸುವುದು.
- ವರದಕ್ಷಿಣೆ ಎಂದರೇನು? ಸಮಾಜದಲ್ಲಿ ಇದರ ಬೇರುಗಳು ಗಟ್ಟಿಗೊಳ್ಳಲು ಇರುವ ಕಾರಣ ಅದರ ಹಿಂದಿನ ಚಿಂತನಾಕ್ರಮ ಗುರುತಿಸುವುದು.
- ವರದಕ್ಷಿಣೆ ಆಸ್ತಿಯಾಗಿ ಪರಿವರ್ತಿಸಿಕೊಳ್ಳಬೇಕೆಂಬ ಭಿನ್ನ ನೆಲೆ ವಿಶ್ಲೇಷಣೆಯನ್ನು ತಿಳಿಯುವ ಉದ್ದೇಶವನ್ನು ಇಟ್ಟುಕೊಂಡಿದೆ.
- ವರದಕ್ಷಿಣೆ ಹೆಸರಲ್ಲಿ ದಾಖಲೆಯಾದ ಪ್ರಕರಣಗಳನ್ನು ಆಧರಿಸಿ ಅದರ ಹಿಂದಿನ ಒಳರಾಜಕಾರಣಗಳನ್ನು ತಿಳಿಯುವುದು. ಒಟ್ಟಿನಲ್ಲಿ ಈ ಅಧ್ಯಯನದಲ್ಲಿ ವರದಕ್ಷಿಣೆಯನ್ನು ಒಂದು ಪದವಾಗಿ, ಪರಿಭಾಷೆಯಾಗಿ ನೋಡದೆ ಒಂದು ಪರಿಕಲ್ಪನೆಯಾಗಿ ನೋಡಲಾಗಿದೆ.

ಇಂದು ವರದಕ್ಷಿಣೆ ಎನ್ನುವುದು ಮಹಿಳಾ ಬದುಕಿಗೆ ಅನಿಷ್ಟ ಪದ್ಧತಿಯಾಗಿ ಹೆಡೆ ಎತ್ತಿ ನಿಂತಿದೆ. ವರದಕ್ಷಿಣೆ 'ವಿವಾಹ' ಎಂಬುದನ್ನು ಒಂದು ಮಾರುಕಟ್ಟೆಯಾಗಿ ಪರಿವರ್ತಿಸಿ, ಅದರ ಮೂಲಕ ಮಹಿಳೆಯ ಹಾಗೂ ಆಕೆಯ ಕುಟುಂಬದ ಶೋಷಣೆಗೆ ಯತ್ನ ನಡೆಯುತ್ತದೆ. ವರದಕ್ಷಿಣೆಯನ್ನು ಸಮರ್ಥಿಸುವ ಹೆಣ್ಣುಮಕ್ಕಳ ಹಿಂದಿರುವ ಉದ್ದೇಶಗಳನ್ನು ಗುರುತಿಸುವುದು. ಈ ಕುರಿತು ಮಧುಕೇಶ್ವರವರ ಚಿಂತನೆಗಳನ್ನು ಇಂದಿನ ವಿದ್ಯಾವಂತರು ಹಾಗೂ ಮಹಿಳಾ ಚಳುವಳಿಗಾರರು ಮಾದರಿಯಾಗಿಸಿಕೊಳ್ಳುವುದರ ಜೊತೆಗೆ ವರದಕ್ಷಿಣೆ ಸಮಸ್ಯೆಯನ್ನು ಸಂಪೂರ್ಣ ತೊಡೆದು ಹಾಕಿ ಬದುಕಿನಲ್ಲಿ ಹೇಗೆ ಅನ್ವಹಿಸಿಕೊಳ್ಳಬೇಕೆನಿಸುವುದರ ಕುರಿತಾದ ಚಿಂತನೆಯನ್ನು ಈ ಅಧ್ಯಯನ ಮಾಡುತ್ತದೆ.

ವರದಕ್ಷಿಣೆ ನಿಷೇಧ ಕುರಿತು ಅನೇಕ ಕಾನೂನುಗಳನ್ನು ರೂಪಿಸಿದರೂ, ರೂಪಿಸಿದ ಕಾನೂನುಗಳನ್ನು ಮತ್ತೆ ಮತ್ತೆ ಸುಧಾರಣೆಗೊಳಪಡಿಸಿದರು ವರದಕ್ಷಿಣೆಗಾಗಿ ಹಿಂಸಿಸಿದವರನ್ನು ಶಿಕ್ಷಿಸಿದರೂ, ವರದಕ್ಷಿಣೆಯ ವಿಷಯದಲ್ಲಿ ಯಾವುದೇ ಸಾಮಾಜಿಕ ಬದಲಾವಣೆಯಾಗಲು ಸಾಧ್ಯವಾಗಲಿಲ್ಲ ಯಾಕೆ? ವರದಕ್ಷಿಣೆಯ ಸಮಸ್ಯೆಯನ್ನು ವರದಕ್ಷಿಣೆಯ ನೆಲೆಯಲ್ಲಿ ನಿಂತುಕೊಂಡು ಚರ್ಚಿಸದೇ ಇನ್ನಾವ ನೆಲೆಯಲ್ಲಿ ನಿಂತು ಚರ್ಚಿಸಬೇಕು. ಮಹಿಳೆ ಮತ್ತು ಆಸ್ತಿ ಹಕ್ಕಿನ ನೆಲೆಯಲ್ಲಿ ಚರ್ಚಿಸಿದಲ್ಲಿ ವರದಕ್ಷಿಣೆ ಸಮಸ್ಯೆಗೆ ಪರಿಹಾರ ಹಾಗೂ ಪರ್ಯಾಯ ವ್ಯವಸ್ಥೆ ಎರಡೂ ದೊರೆಯಲು ಸಾಧ್ಯವೆ ಎನ್ನುವುದನ್ನು ಚರ್ಚಿಸುವ ಉದ್ದೇಶವನ್ನು ಈ ಸಂಶೋಧನಾ ಪ್ರಬಂಧ ಹೊಂದಿದೆ.

ವರದಕ್ಷಿಣೆ ಸಮಸ್ಯೆಯು ನಿಜವಾಗಿ ಸಮಸ್ಯೆಯಾಗಿದೆಯೇ ಎನ್ನುವ ಅಂಶವನ್ನು ಕಂಡುಕೊಳ್ಳುವುದು ಮತ್ತು ಮಹಿಳೆಯರ ಹಲವಾರು ಸಮಸ್ಯೆಗಳನ್ನು ವರದಕ್ಷಿಣೆಯ ಸಮಸ್ಯೆಯಾಗಿ ಯಾಕೆ ಪರಿವರ್ತಿಸಲಾಗುತ್ತಿದೆ. ಬಹಳಷ್ಟು ಸಮಸ್ಯೆಗಳಿಗೆ ಕಾನೂನುಗಳು ಒಳಗೊಂಡರೂ, ಇಂಥ ಸಮಸ್ಯೆಗಳಿಗೆ ಪ್ರಬಲವಾದ ಸಮಸ್ಯೆಯೆಂದು ಪ್ರಕಟಗೊಳ್ಳುವದಿಲ್ಲ ಮತ್ತು ಸಮಾಜದಲ್ಲಿ ವರದಕ್ಷಿಣೆ ಸಮಸ್ಯೆಯನ್ನು ತೀರ ಗಂಭೀರವಾಗಿ ಆದ್ಯತೆ ಕೊಟ್ಟಂತೆ, ಬೇರೆ ಸಮಸ್ಯೆಗಳಿಗೆ ಆದ್ಯತೆ ಕೊಟ್ಟರೂ ಅವು ಪ್ರಬಲ ಸಮಸ್ಯೆಯಾಗುವುದಿಲ್ಲ. ಇದರಿಂದ ಇವುಗಳು ವರದಕ್ಷಿಣೆಯ ಸಮಸ್ಯೆಯಂತೆ ಪರಿವರ್ತನೆಯಾಗುತ್ತಿವೆ ಮತ್ತು ಪರಿಗಣಿಸುವ ವ್ಯವಸ್ಥೆ ಯಾರು ಹೊಂದಿರುತ್ತಾರೆ ಎನ್ನುವುದು, ಮಹಿಳೆಯರ ಬೇರೆ ಹಿಂಸೆಗಳನ್ನು ಈ ಸಮಸ್ಯೆಯಲ್ಲಿ ನೋಡುತ್ತಿರುವುದು ದುರದುಷ್ಟಕರ ಸಂಗತಿ. ಪ್ರತಿಯೊಂದು ಕಿರುಕುಳ ಹಿಂಸೆಗಳನ್ನು ವರದಕ್ಷಿಣೆ ಸಮಸ್ಯೆ ಎಂದು ಹೇಳುವುದು ಸಾಧ್ಯವಿಲ್ಲ. ಎಲ್ಲಾ ಹಿಂಸೆ ಕಿರುಕುಳಗಳನ್ನು ವರದಕ್ಷಿಣೆ ಪ್ರಕರಣಗಳಾಗಿ ದಾಖಲಿಸುವುದರಿಂದ ಅಥವಾ ಅರ್ಥಮಾಡಿಕೊಳ್ಳಬೇಕೆಂದರೆ ಹಿಂದಿನ

ರಾಜಕಾರಣವನ್ನು ತಿಳಿಯಲು ಪ್ರಯತ್ನಿಸಬೇಕು. ವರದಕ್ಷಿಣೆ ಪ್ರಕರಣಗಳು ಸಮಸ್ಯೆಯಾಗಿ ಕಂಡರೂ ಅವುಗಳು ನಿಜವಾಗಿರುವುದಿಲ್ಲ, ಎನ್ನುವುದು ಗಮನಾರ್ಹ.

ವರದಕ್ಷಿಣೆ ನಿಷೇಧ ಕಾನೂನುಗಳಲ್ಲಿ ಎಷ್ಟೇ ಬದಲಾವಣೆಗಳನ್ನು ತಂದರೂ, ಈ ಪದ್ಧತಿ ಏಕೆ ನಿಷೇಧಕ್ಕೆ ಒಳಗಾಗುತ್ತಿಲ್ಲ? ಈ ಕಾಯಿದೆ ಅಡಿಯಲ್ಲಿ ಅನೇಕರನ್ನು ಶಿಕ್ಷಿಸಿದರೂ ವರದಕ್ಷಿಣೆಯ ಪ್ರಭಾವ ಏಕೆ ತಗ್ಗಿಲ್ಲ? ವರದಕ್ಷಿಣೆಯನ್ನು ಪಡೆಯುವುದಕ್ಕೆ ಹುಡುಗಿಯರೇ ಏಕೆ ಆಸಕ್ತಿ ತೋರಿಸುತ್ತಾರೆ. ಅದಕ್ಕೆ ಅವರು ಕೊಡುವ ಕಾರಣಗಳೇನು? ಈ ಕಾರಣಗಳನ್ನು ಅನುಲಕ್ಷಿಸಿ ಕಾಯಿದೆಗಳನ್ನು ರೂಪಿಸಿ, ಅದನ್ನು ಕಡ್ಡಾಯವಾಗಿ ಜಾರಿಗೊಳಿಸಲು ಪ್ರಯತ್ನಿಸಿದರೆ ವರದಕ್ಷಿಣೆ ಸಮಸ್ಯೆ ಬಗೆಹರಿಯಬಹುದೇ? ವಿವಾಹಿತ ಮಹಿಳೆಯ ಎಲ್ಲ ಸಮಸ್ಯೆಗಳನ್ನು ವರದಕ್ಷಿಣೆಯ ಹೆಸರಿನಲ್ಲಿ ಯಾಕೆ ದಾಖಲಿಸಲಾಗುತ್ತಿದೆ. ಅದರ ಹಿಂದಿನ ರಾಜಕಾರಣವೇನು ಎನ್ನುವುದನ್ನು ವಿಶ್ಲೇಷಿಸಲು ಈ ಅಧ್ಯಯನ ಪ್ರಯತ್ನಿಸುತ್ತದೆ.

**ವ್ಯಾಪ್ತಿ**

ವರದಕ್ಷಿಣೆ ಸಮಸ್ಯೆ ಭಾರತದ ಎಲ್ಲ ಪ್ರದೇಶದಲ್ಲಿ ಕಂಡು ಬರುತ್ತದೆ. ಆದರೆ ಪ್ರಸ್ತುತ ಅಧ್ಯಯನವು ಕರ್ನಾಟಕವನ್ನು ಗಮನದಲ್ಲಿಟ್ಟುಕೊಂಡಿದ್ದು ಕ್ಷೇತ್ರಕಾರ್ಯಕ್ಕೆ ಕೊಪ್ಪಳ ಜಿಲೆಯ ಗಂಗಾವತಿ, ಕೊಪ್ಪಳ ನಗರಗಳನ್ನು ಹಾಗೂ ಸುತ್ತಲಿನ ಹಳ್ಳಿಗಳನ್ನು ಆಯ್ದುಕೊಳ್ಳಲಾಗಿದೆ. ಈ ಅಧ್ಯಯನದ ಅನುಕೂಲತೆಗಾಗಿ ಎರಡು ತರಹದ ಮಾಹಿತಿ ಬಳಸಿದೆ. ಒಂದು ವರದಕ್ಷಿಣೆ ಅಧ್ಯಯನ ಸಂಬಂಧ ಅವಲೋಕಿಸಲಾಗಿದೆ. ಎರಡನೆಯದು ಕೊಪ್ಪಳ/ಗಂಗಾವತಿ ನಗರದಲ್ಲಿ ದಾಖಲೆ/ ದಾಖಲೇತರ ಪ್ರಕರಣಗಳನ್ನು ತೆಗೆದುಕೊಳ್ಳಲಾಗಿದೆ. ಮೊದಲ ಆದ್ಯತೆಯನ್ನು ಗಂಗಾವತಿ ನಗರದ ಪೋಲೀಸ್ ಠಾಣೆಯ ದಾಖಲೆಗಳ ಪ್ರಕರಣಗಳನ್ನು ಪರಿಗಣಿಸಲಾಗಿದೆ. ಈ ಪ್ರಕರಣಗಳಿಂದ ಮಾಹಿತಿಯನ್ನು ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಲಾಗಿದೆ. ಇದರಲ್ಲಿ ಸಂದರ್ಶನ, ಪ್ರಶ್ನಾವಳಿ, ಅವಲೋಕನ ವಿಧಾನಗಳ ಮೂಲಕ ಮಾಹಿತಿ ಸಂಗ್ರಹಿಸಲಾಗಿದೆ. ಜೊತೆಗೆ ಪತ್ರಿಕಾ ವರದಿಗಳನ್ನು ಅವಲೋಕಿಸಲಾಗಿದೆ. ವರದಕ್ಷಿಣೆಯ ವಿವಿಧ ಆಯಾಮ ತಿಳಿಯಲು ವರದಕ್ಷಿಣೆ ನಿಷೇಧಕ್ಕೆ ಬಂದ ಕಾನೂನು ತಿಳಿಯಲು ಕಾನೂನು ಪುಸ್ತಕಗಳನ್ನು ಅವಲೋಕಿಸಲಾಗಿದೆ.

**ವಿಧಾನ**

ಪ್ರಸ್ತುತ ಅಧ್ಯಯನದಲ್ಲಿ ಸ್ತ್ರೀವಾದಿ ದೃಷ್ಟಿಕೋನವನ್ನು ತಾತ್ವಿಕತೆಯಾಗಿ ಇಟ್ಟುಕೊಳ್ಳಲಾಗಿದೆ. ಅದರಲ್ಲಿ ಗುಣಾತ್ಮಕ ವಿಧಾನದ ಪ್ರಮುಖ ಪ್ರಕಾರವಾದ ಪ್ರಕರಣಗಳ ಅಧ್ಯಯನ ವಿಧಾನವನ್ನು ಬಳಸಿದೆ. ಅಧ್ಯಯನಕ್ಕೆ ಅವಶ್ಯಕವಾದ ಮಾಹಿತಿಯನ್ನು ಸಂಗ್ರಹಿಸಲು ಪ್ರಶ್ನಾವಳಿ ತಯಾರಿಸಿ

ಸಂದರ್ಶನ ಮಾಡಲಾಗಿದೆ. ಅಧ್ಯಯನಕ್ಕೆ ಸಂಬಂಧಿಸಿದ ಸಾಹಿತ್ಯಿಕ ಮಾಹಿತಿಗೆ ಗ್ರಂಥಾಲಯದ ಅವಲೋಕನ ಮಾಡಲಾಗಿದೆ. ಸಾಹಿತ್ಯದ ಅವಲೋಕನ ಮತ್ತು ಸಂದರ್ಶನದಲ್ಲಿ ಲಭ್ಯವಾದ ಮಾಹಿತಿಯ ವಸ್ತುನಿಷ್ಠ ವಿಶ್ಲೇಷಣೆಗೆ ಗುಣಾತ್ಮಕ ವಿಧಾನವನ್ನು ಬಳಸಲಾಗಿದೆ. ಈ ಹಿನ್ನೆಲೆಯಿಂದ ಪ್ರಕರಣಗಳ ಅಧ್ಯಯನದಲ್ಲಿ ವಕ್ತೃವಿನ ಖಾಸಗಿ ಹೇಳಿಕೆಗಳನ್ನು ಅಧ್ಯಯನಕ್ಕೆ ಬಳಸಲಾಗಿದೆ.

**ಅಧ್ಯಯನ ಸಮೀಕ್ಷೆ**

ಪ್ರತಿಯೊಂದು ವಿಷಯವನ್ನು ನಾವು ಆಲೋಚಿಸುವಾಗ, ಅಧ್ಯಯನಕ್ಕೆ ತೊಡಗಿದಾಗ, ಆ ವಿಷಯ ಕುರಿತು ನಡೆದ ಅಧ್ಯಯನಗಳನ್ನು ಅವಲೋಕಿಸಿ ದಾಖಲಿಸುವುದು ಬಹಳ ಮುಖ್ಯ. ಏಕೆಂದರೆ ಈ ಮೂಲಕ ಅಧ್ಯಯನ ಅಗತ್ಯತೆಯನ್ನು ಗುರುತಿಸಿಕೊಳ್ಳಲು ಸಾಧ್ಯವಾಗುತ್ತದೆ. ಈ ಹಿನ್ನೆಲೆಯಿಂದ ಈ ಅಧ್ಯಯನ ಸಮೀಕ್ಷೆ ಮಹತ್ವ ಪಡೆದಿದೆ. ವರದಕ್ಷಿಣೆ ಬಗೆಗೆ ಒಂದೇ ಪರಿಸರದಲ್ಲಿ ಬೇರೆ ಬೇರೆ ಭಾಷೆಯಲ್ಲಿ ಅನೇಕ ಅಧ್ಯಯನಗಳು ನಡೆದಿವೆ. ಇಂಗ್ಲೀಷ್/ಕನ್ನಡದಲ್ಲಿ ಈ ವಿಷಯ ಕುರಿತು ನಡೆದ ಅಧ್ಯಯನಗಳ ಸಂಖ್ಯೆ ಅಧಿಕವಾಗಿದೆ. ಇವುಗಳು ಸಾಮಾಜಿಕ ಅಧ್ಯಯನಗಳಾಗಿವೆ. ಈ ಅಧ್ಯಯನಗಳು ವರದಕ್ಷಿಣೆಯನ್ನು ಕಪ್ಪು–ಬಿಳುಪಿನ ನೆಲೆಯಲ್ಲಿ ಗ್ರಹಿಸಿ ಈ ಸಮಸ್ಯೆಗೆ ಕಾನೂನಿನಾತ್ಮಕ ಪರಿಹಾರ ನೀಡಬಯಸಿದರೆ, ಮಹಿಳಾ ದೃಷ್ಟಿಯಿಂದ ವರದಕ್ಷಿಣೆ ಕುರಿತು ನಡೆದ ಅಧ್ಯಯನಗಳು ವರದಕ್ಷಿಣೆಯನ್ನು ಸಾಮಾಜಿಕ ಅಧ್ಯಯನಗಳು ಗುರುತಿಸಿದ ಸಮಸ್ಯೆಗಳ ಆಚೆಹೋಗಿ ವರದಕ್ಷಿಣೆ ಸಮಸ್ಯೆ ತನ್ನ ಒಳ ಅಡಗಿಸಿಟ್ಟುಕೊಂಡ ಇತರ ಸಮಸ್ಯೆಗಳು ಮತ್ತು ಅದರ ಸ್ವರೂಪ ಹಿಂಸೆ ಅದರ ಹಿಂದಿರುವ ರಾಜಕಾರಣಗಳನ್ನು ಬಯಲುಗೊಳಿಸಲು ಪ್ರಯತ್ನಿಸುತ್ತದೆ. ಈ ದೃಷ್ಟಿಯಿಂದ ನಡೆದ ಅಧ್ಯಯನ ಸಂಖ್ಯೆ ಬಹಳ ವಿರಳ. ಇಂತಹ ಅಧ್ಯಯನಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಮೂರು ರೀತಿಯಲ್ಲಿ ವರ್ಗೀಕರಿಸಲಾಗಿದೆ.

೧. ಸಂಶೋಧನಾತ್ಮಕ ಭಾಗವಾಗಿ ನಡೆದ ಅಧ್ಯಯನಗಳು.

೨. ಮಹಿಳಾ ಚಳುವಳಿಯ ಭಾಗವಾಗಿ ನಡೆದ ಅಧ್ಯಯನಗಳು.

೩. ಕಾನೂನಾತ್ಮಕ ಅಧ್ಯಯನಗಳು.

ವರದಕ್ಷಿಣೆ ವಿಷಯವನ್ನು ಭಿನ್ನ ನೆಲೆಯಿಂದ ನೋಡುವ ಬಹುಮುಖ್ಯವಾದ ಅಧ್ಯಯನಕಾರರಾದ, ಮಧುಕೀಶ್ವರ್‌ರವರು ಡಿ.ಆರ್.ನಾಗರಾಜ ಸಂಪಾದನೆಯ 'ಮಾನುಷಿ ಮಾತು' ಎಂಬ ಗ್ರಂಥದಲ್ಲಿ ಎಲ್.ಜಿ. ಮೀರಾರರು ಮಧುಕೀಶ್ವರ್ ಚಿಂತನೆಗಳನ್ನು ಸಂಗ್ರಹಿಸಿ 'ವರದಕ್ಷಿಣೆ ನಿಷೇಧದ ಬಗ್ಗೆ ಒಂದು ಮರುಚಿಂತನೆ' ಎಂಬ ಲೇಖನವನ್ನು ಅನುವಾದಿಸಿದ್ದಾರೆ. ಇದರಲ್ಲಿ ವರದಕ್ಷಿಣೆಯ ಬಗೆಗೆ ಮಧುಕೀಶ್ವರ್ ನಿಲುವುಗಳೆಂದರೆ, ವರದಕ್ಷಿಣೆ ನಿಷೇಧದಿಂದ ಮಹಿಳೆಗೆ ಈಗಿರುವ ಸಮಸ್ಯೆ ಪರಿಹಾರವಲ್ಲ. ವರದಕ್ಷಿಣೆ ಎನ್ನುವುದು ಮಹಿಳೆಗೆ 'ಸ್ತ್ರೀಧನ'ವಾಗಿ ಪರಿಗಣಿತವಾಗಬೇಕು. ಜೊತೆಗೆ ಅವಳಿಗೆ ಆರ್ಥಿಕ ಸಬಲೀಕರಣಕ್ಕೆ ನಾಂದಿಯಾಗಬೇಕು. ಅದು

ಕುಟುಂಬ ಆಸ್ತಿಯಲ್ಲಿ ಮಹಿಳೆಗೆ ಆರ್ಥಿಕ ಭದ್ರತೆಯನ್ನು ಒದಗಿಸಬೇಕೆಂಬ ನಿಲುವು ಹೊಂದಿದ್ದಾರೆ.

ಎಸ್. ರಾಜಶೇಖರರವರು ಬರೆದ 'ಸಾಮಾಜಿಕ ಸಮಸ್ಯೆಗಳು' ಎನ್ನುವ ಗ್ರಂಥದಲ್ಲಿ 'ವರದಕ್ಷಿಣೆ' ಎನ್ನುವ ಲೇಖನದಲ್ಲಿ ವರದಕ್ಷಿಣೆ ಪಿಡುಗು ಎನ್ನುವುದು ಮಹಿಳಾ ಬದುಕಿಗೆ ಕುಂದು ಉಂಟು ಮಾಡಿದೆ. ಇದು ಮಹಿಳೆಯ ಹಿಂಸೆಗೆ ಆಯುಧವಾಗಿದೆ ಎಂಬುದನ್ನು ಗುರುತಿಸುತ್ತಾರೆ. ಜೊತೆಗೆ ಅದರ ಸ್ವರೂಪ, ಅದರಿಂದ ಸಮಾಜದಲ್ಲಿ ವಿವಿಧ ವಲಯದಲ್ಲಿ ಮಹಿಳೆಯರ ಮೇಲೆ ಆಗುವ ಪರಿಣಾಮಗಳನ್ನು ಗುರುತಿಸುತ್ತಾರೆ.

ಮಹಿಳಾ ಚಳುವಳಿಯನ್ನು ಪ್ರಧಾನವಾಗಿ ಪರಿಗಣಿಸಿ ನಡೆದ ಅಧ್ಯಯನಗಳಲ್ಲಿ ಎರಡು ತುಂಬಾ ಮುಖ್ಯವಾಗಿವೆ. ಒಂದು ಪ್ರೊ. ಹೆಚ್.ವಿ.ನಾಗೇಶರ 'ಸಾಮಾಜಿಕ ಚಳುವಳಿಗಳು' ಎಂಬ ಗ್ರಂಥದಲ್ಲಿ ಇತರ ದೇಶಗಳಲ್ಲಿ ಮಹಿಳಾ ಚಳುವಳಿಗಳನ್ನು ದಾಖಲಿಸುತ್ತಾ ಭಾರತ ಮಹಿಳಾ ಚಳುವಳಿ ತೆಗೆದುಕೊಂಡ ವಿಷಯಗಳಲ್ಲಿ ವರದಕ್ಷಿಣೆಯನ್ನು ಕುರಿತು ಪ್ರಸ್ತಾಪಿಸುತ್ತಾರೆ. ಇವರು ಈ ಚಳುವಳಿಗಳು ವರದಕ್ಷಿಣೆಯನ್ನು ತನ್ನ ಮುಖ್ಯ ವಿಷಯವಾಗಿ ತೆಗೆದುಕೊಳ್ಳದೆ ಅನುಷಂಗಿಕ ವಿಷಯವಾಗಿ ತೆಗೆದುಕೊಂಡಿವೆ ಎಂದು ಅಭಿಪ್ರಾಯಪಡುತ್ತಾರೆ. ಎರಡನೆಯದು ಮಧುಕೀಶ್ವರ್ (ಅನುವಾದ ಹೇಮಲತಾ ಹೆಚ್. ಎಂ) "ಭಾರತದ ಮಹಿಳೆಯರ ಬದುಕು ಮತ್ತು ಹೋರಾಟ" ಪುಸ್ತಕ ಇದರಲ್ಲಿ ಮಧುಕೀಶ್ವರ್‌ವರು ೧೯೭೦ರ ದಶಕದ ನಂತರ ದೊಡ್ಡ ನಗರದಲ್ಲಿ ಸಣ್ಣ ಸಣ್ಣ ಮಹಿಳಾ ಗುಂಪುಗಳು ಹುಟ್ಟಿಕೊಂಡವು. ಈ ಗುಂಪುಗಳ ವೈವಿಧ್ಯವಾಗಿವೆ. ಮತ್ತು ಇತರ ಹೋರಾಟದ ಗುಂಪುಗಳ ಒಂದು ಭಾಗವಾಗಿವೆ ಎಂದು ಹೇಳುತ್ತಾರೆ. ನಗರ ಈ ಮಹಿಳಾ ಗುಂಪುಗಳ ಹೋರಾಟಕ್ಕೆ ತೆಗೆದುಕೊಳ್ಳುವ ವಿಷಯಗಳಲ್ಲಿ ವರದಕ್ಷಿಣೆ ಮುಖ್ಯ. ಇದರಲ್ಲಿ ಅವರು ಇಂತಹ ಚಳುವಳಿಗಳ ಪ್ರಚಾರದಲ್ಲಿ ಸಮೂಹ ಮಾಧ್ಯಮಗಳ ಪಾತ್ರವನ್ನು ಪ್ರಶ್ನಿಸುತ್ತಾರೆ ಮತ್ತು ಆತ್ಮಹತ್ಯೆ, ಆಕಸ್ಮಿಕವಾಗಿ ಸುಟ್ಟುಕೊಂಡು ಸತ್ತಂತಹ ಮಹಿಳೆಯರ ಸಾವುಗಳ ವಿಚಾರ ನಡೆಯಬೇಕೆಂದು ಒತ್ತಾಯಿಸುತ್ತಾರೆ.

ವರದಕ್ಷಿಣೆ ನಿಷೇಧ ಕಾನೂನು ಕುರಿತು ಅನೇಕ ಗ್ರಂಥಗಳು ಬಂದಿವೆ. ಅದರಲ್ಲಿ ಗೀತಾಕೃಷ್ಣಮೂರ್ತಿಯವರ 'ಮಹಿಳಾ ಕಾನೂನು ಮತ್ತು ರಾಜಕಾರಣ', ಮಹಿಳಾ ಸಮಾಜ ಕಾನೂನು' ಎಂಬ ಎರಡು ಪುಸ್ತಕಗಳು ಬಹಳ ಮುಖ್ಯವಾಗಿವೆ. ಮೊದಲ ಗ್ರಂಥದಲ್ಲಿ ಅವರು ೧೯೬೧ರಲ್ಲಿ ವರದಕ್ಷಿಣೆ ನಿಷೇಧ ಅಧಿನಿಯಮ ಜಾರಿಗೆ ಬಂದಿತು. ಕಾನೂನಿನ ಉದ್ದೇಶ ಒಳ್ಳೆಯದಾದರೂ ಕಾನೂನಿನಲ್ಲಿರುವ ಕೆಲವು ನ್ಯೂನತೆಗಳಿಂದಾಗಿ ಹಾಗೂ ಸಾಕ್ಷಿಗಳ ಕೊರತೆಯಿಂದಾಗಿ ಅದರ ಪರಿಣಾಮ ನಿರೀಕ್ಷೆಯ ಮಟ್ಟಕ್ಕೆ ಫಲಿಸಲಿಲ್ಲ ಎಂದು ಹಲವು

ಪ್ರಕರಣಗಳ ಮೂಲಕ ಕಳವಳ ವ್ಯಕ್ತಪಡಿಸುತ್ತಾರೆ. ಇನ್ನು "ಮಹಿಳೆ ಸಮಾಜ ಕಾನೂನು" ಎಂಬ ಪುಸ್ತಕದಲ್ಲಿ ಇವರು ಪ್ರಕರಣಗಳ ಮೂಲಕ ವರದಕ್ಷಿಣೆ ಅಧಿನಿಯಮ ವರದಕ್ಷಿಣೆಯನ್ನು ಹೇಗೆ ಪರಿಭಾವಿಸಲಾಗಿದೆ ಎಂದು ತಿಳಿಸುತ್ತಾರೆ. ನಂತರ ವರದಕ್ಷಿಣೆಗೆ ಕಾಯಿದೆ ಹೊಂದಿದ ವಿವಿಧ ತಿದ್ದುಪಡಿಗಳನ್ನು ಅದು ಒಳಗೊಂಡ ಸಂಗತಿಗಳನ್ನು ಹೇಳುತ್ತಾರೆ.

"ಲಿಂಗತ್ವ ಮತ್ತು ಕಾನೂನು" ಕಾರ್ಯಕರ್ತರ ಕೈಪಿಡಿಯಲ್ಲಿ ವರದಕ್ಷಿಣೆ ಅಧಿನಿಯಮ ಸ್ಪಷ್ಟ ಸಂಗತಿ ಹೇಳಲಾಗಿದೆ. ವರದಕ್ಷಿಣೆಯ ವಿವಿಧ ಆಯಾಮಗಳನ್ನು ತನ್ನದೇ ಆದ ದೃಷ್ಟಿಕೋನದಲ್ಲಿ ಮತ್ತು ತನ್ನದೇ ಆದ ಪರಿಮಿತಿಯಲ್ಲಿ ನೋಡಲು ಪ್ರಯತ್ನಿಸಿದೆ.

**ಮಹತ್ವ**

ಪ್ರತಿಯೊಂದು ಅಧ್ಯಯನಕ್ಕೆ ತನ್ನದೇ ಆದ ಪ್ರಾಮುಖ್ಯತೆ ಇರುತ್ತದೆ. ಪ್ರಸ್ತುತ ಅಧ್ಯಯನ ಮಹಿಳಾ ಅಧ್ಯಯನ ಭಾಗವಾಗಿದೆ. ಹಾಗಾಗಿ ಈ ಅಧ್ಯಯನ ಮಹಿಳಾ ಅಧ್ಯಯನ ಜ್ಞಾನ ಶಾಖೆಯ ಸೈದ್ಧಾಂತಿಕತೆಗೆ ಬಲ ತಂದು ಕೊಡುತ್ತದೆ. ಸ್ತ್ರೀವಾದವು ಸಮಾಜದ ಎಲ್ಲಾ ಕ್ಷೇತ್ರಗಳು ಪುರುಷಪ್ರಧಾನವಾಗಿವೆ ಎಂದು ದೃಢಪಡಿಸಿದೆ. ಈ ಹಿನ್ನೆಲೆಯಿಂದ ಮಹಿಳಾ ಅಧ್ಯಯನದ ಸಂಶೋಧನೆ ನಡೆಯುತ್ತಿವೆ. ಇದರ ಭಾಗವಾದ ಈ ಅಧ್ಯಯನವು ವಿವಿಧ ಸಾಮಾಜಿಕ ಪರಿಸ್ಥಿತಿಯಿಂದ ಉಂಟಾಗುವ ಸಾಮಾಜಿಕ ಸಮಸ್ಯೆಯನ್ನು ಅದರಲ್ಲೂ 'ವರದಕ್ಷಿಣೆ' ಸಮಸ್ಯೆಯನ್ನು ಸ್ತ್ರೀವಾದಿ ನೋಟಕ್ಕೆ ಒರೆಹಚ್ಚಿ ವಿಶ್ಲೇಷಿಸಿದೆ. ಅಂದರೆ ಸಮಾಜ ಸರಳವಾಗಿ ನಡೆಯಲು ಸ್ಥಾಪಿತವಾದ ಸಂಸ್ಥೆಗಳು ಯಾರ ಪರವಾಗಿವೆ? ಅಸಮಾನತೆ ದೃಢೀಕರಿಸುವ ಈ ಸಂಸ್ಥೆಗಳು ಪುರುಷಹಿತ ಕಾಪಾಡಲು ವಿವಾಹ ಸಂದರ್ಭ ಹಾಗೂ ನಂತರ ಮಹಿಳಾ ಸಮುದಾಯಕ್ಕೆ ಯಾವ ತರಹ ನಡೆದುಕೊಳ್ಳುತ್ತೇವೆ ಎಂಬುದನ್ನು ತಿಳಿಯುತ್ತದೆ. ಈ ಮೂಲಕ ವರದಕ್ಷಿಣೆ ಮತ್ತು ಸಮಾಜದಲ್ಲಿನ ಲಿಂಗ ಅಸಮಾನತೆಗೆ ಇರುವ ಸಂಬಂಧವನ್ನು ಅರ್ಥ ಮಾಡಿಕೊಳ್ಳಲಾಗುತ್ತದೆ. ಈ ಹಿನ್ನೆಲೆಯಿಂದ ಲಿಂಗ ಸಮಾನತೆ ಸಮಾಜ ನಿರ್ಮಾಣಕ್ಕೆ ಮಹಿಳೆಯ ಶೋಷಣೆಗೆ ಕಾರಣವಾಗುವ ಸಂಗತಿಗಳನ್ನು ಹೋಗಲಾಡಿಸಲು ಕಾನೂನು ಮತ್ತು ಸಮಾಜದಲ್ಲಿ ಆಗಬೇಕಾದ ಬದಲಾವಣೆಗಳಾವುವು ಮತ್ತು ಇದಕ್ಕೆ ಮಹಿಳಾ ಸಮುದಾಯ ಅನುಸರಿಸಬೇಕಾಗುವ ತಂತ್ರಗಳ ಬಗೆಗೆ ಯೋಚಿಸಲು ಪ್ರಸ್ತುತ ಅಧ್ಯಯನ ಪ್ರಯತ್ನಿಸುತ್ತಿದೆ.

**ಉಲ್ಲೇಖ:**

೧. ಪೂರ್ವಾಚಾರ. ಎಂ: ೨೦೦೦: ಸಮಾಜ ಮತ್ತು ಸಂಸ್ಕೃತಿ, ವಿಶ್ವಕರ್ಮ ಪ್ರಕಾಶನ, ಶಿವಮೊಗ್ಗ.

# ಅಧ್ಯಾಯ – ೨

## ವರದಕ್ಷಿಣೆ– ಚಾರಿತ್ರಿಕ ಬೆಳವಣಿಗೆ

## ಪ್ರಸ್ತುತದಲ್ಲಿ ವರದಕ್ಷಿಣೆ

ತೆರ, ಕನ್ಯಾಶುಲ್ಕ, ವಧುದಕ್ಷಿಣೆ, ವರದಕ್ಷಿಣೆ ಎನ್ನುವಂತಹದ್ದು ವಿವಾಹ ಎನ್ನುವ ಸಾಮಾಜಿಕ ಸಂದರ್ಭದಲ್ಲಿ ಆರಂಭವಾಗುವ ಪ್ರಕ್ರಿಯೆ. ಈ ಪ್ರಕ್ರಿಯೆ ಸಾಮಾಜಿಕ ಸಮಸ್ಯೆಯಾಗಿ ರೂಪುಗೊಂಡಿದೆ. ಈ ಸಮಸ್ಯೆಯನ್ನು ಅಧ್ಯಯನ ಮಾಡುವಾಗ ಚಾರಿತ್ರಿಕ ಹಂತಗಳನ್ನು ಗಮನಿಸುವುದು ಅಧ್ಯಯನ ದೃಷ್ಟಿಯಿಂದ ಬಹಳ ಮುಖ್ಯ. ಈ ಹಿನ್ನೆಲೆಯಿಂದ ಇಂಥ ಸಮಸ್ಯೆಯನ್ನು ಅನುಭವಿಸುತ್ತಿರುವ ಮಹಿಳೆಯರ ಸಾಮಾಜಿಕತೆಯನ್ನು ಪರಿಗಣಿಸುವುದು ಸಹ ಅಷ್ಟೇ ಮುಖ್ಯ. ಏಕೆಂದರೆ ಯಾವುದೇ ಪ್ರಕ್ರಿಯೆ ತನ್ನಷ್ಟಕ್ಕೆ ತಾನೇ ಪ್ರಾರಂಭವಾಗುವುದಿಲ್ಲ ಮತ್ತು ವಿಕಾಸ ಹೊಂದುವುದಿಲ್ಲ. ಅದಕ್ಕೆ ಆ ಸಮಾಜದಲ್ಲಿ ವಾಸಿಸುವವರ, ಸಾಮಾಜಿಕ ಸಂಬಂಧ, ಸಾಮಾಜಿಕ ಸಂದರ್ಭ ಕಾರಣವಾಗುತ್ತದೆ. ಇದು ತನ್ನದೇ ಆದ ಪಾತ್ರವನ್ನು ನಿರ್ವಹಿಸುತ್ತದೆ. ಇಂತಹ ಪಾತ್ರಗಳ ನಿರ್ವಹಣೆಯ ಹಿಂದೆ ಚಿಂತನಾಕ್ರಮಗಳು ಕೆಲಸ ಮಾಡುತ್ತವೆ. ಈ ಚಿಂತನಾಕ್ರಮ ಸಮಾಜದ ವಿವಿಧ ಸಮುದಾಯ ವರ್ಗದಲ್ಲಿ ಈ ಪ್ರಕ್ರಿಯೆಗೆ ತನ್ನದೇ ಆದ ಸ್ವರೂಪವನ್ನು ನೀಡಿರುತ್ತದೆ. ಈ ರೂಪಗಳು ಮಹಿಳಾ ಸಮುದಾಯ ಮೇಲೆ ಒತ್ತಡ ಹೇರಿದೆ. ಈ ಒತ್ತಡಗಳು ಚಳುವಳಿಯ ರೂಪ ಪಡೆದಿವೆ. ಇದರ ಭಾಗವಾಗಿ ಮಹಿಳಾ ಚಳುವಳಿಗಳು ವರದಕ್ಷಿಣೆಯನ್ನು ಚಳುವಳಿಯ ಒಂದು ವಿಷಯವಾಗಿ ಪರಿಗಣಿಸಿವೆ.

ಮಾನವ ಜೀವನದಲ್ಲಿ ವಿವಾಹವು ಒಂದು ಮಹತ್ವದ ಹಂತ, ಇದು ಸ್ತ್ರೀ ಪುರುಷರ ಕೌಂಟುಬಿಕ ಜೀವನವನ್ನು ಗಟ್ಟಿಗೊಳಿಸುವ ಸಂಬಂಧವಾಗಿದೆ. ಆದರೆ ವಿವಾಹವು ಜಾತಿ, ವರ್ಗ, ಪ್ರದೇಶಕ್ಕೆ ತಕ್ಕಂತೆ ಸಂಪ್ರದಾಯ, ಆಚರಣೆ ಭಿನ್ನವಾಗಿದೆ ಮತ್ತು ಸಮಯಕ್ಕೆ ತಕ್ಕಂತೆ ರೂಪಾಂತರಗೊಂಡಿವೆ. ಇಂತಹ ಸಾಮಾಜಿಕ ಸಂಬಂಧವನ್ನು ಏರ್ಪಡಿಸುವ ವಿವಾಹವು ತನ್ನದೇ ಆದ ಸಾಮಾಜಿಕ, ಧಾರ್ಮಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಮಹತ್ವ ಪಡೆದಿವೆ. ವಿವಾಹ ಎರಡು ಕುಟುಂಬಗಳ ನಡುವೆ ನಡೆಯುವ ಸಂಬಂಧವಾಗಿದೆ. ಈ ಸಂಬಂಧದಲ್ಲಿ ನವ ದಂಪತಿಗಳಿಗೆ ಗೌರವಕ್ಕಾಗಿ ಉಡುಗೊರೆ ನೀಡುತ್ತಾರೆ. ಈ ಉಡುಗೊರೆಗಳು ಕಾಲ ಸಮಯಕ್ಕೆ ತಕ್ಕಂತೆ ಬದಲಾವಣೆಗೊಂಡು, ಸಮುದಾಯ, ವರ್ಗಗಳಲ್ಲಿ ಭಿನ್ನ ಸ್ವರೂಪ ಪಡೆದಿದೆ. ಈ ಹಿನ್ನೆಲೆಯಿಂದ ವರದಕ್ಷಿಣೆಯ ವಿಕಾಸವನ್ನು ಪರಿಶೀಲಿಸುವ ಪ್ರಯತ್ನವನ್ನು ಈ ಅಧ್ಯಯನದಲ್ಲಿ ಮಾಡಲಾಗಿದೆ.

ಪ್ರಾಚೀನ ಸಮಾಜದಲ್ಲಿ ಗಂಡನ ಮನೆಯವರು ಹುಡುಗಿಯ ಮನೆಯವರಿಗೆ ಹಣ/ವಸ್ತುವನ್ನೇ ಉಡುಗೊರೆಗಳ ಕಾಣಿಕೆಯಾಗಿ ನೀಡಿ ಮದುವೆ ಮಾಡಿಕೊಡುತ್ತಿದ್ದರು. ಈ ಪದ್ಧತಿಯನ್ನು ತೆರ, ಕನ್ಯಾಶುಲ್ಕ, ವಧುದಕ್ಷಿಣೆ ಎಂದು ಕರೆಯಲಾಗುತ್ತಿತ್ತು. ಈ ಪದಗಳಲ್ಲಿ ತೆರ, ಕನ್ಯಾಶುಲ್ಕ, ವಧುದಕ್ಷಿಣೆ ವ್ಯತ್ಯಾಸವಿದ್ದರೂ ಅರ್ಥದಲ್ಲಿ ಏನೂ ವ್ಯತ್ಯಾಸವಿಲ್ಲ. ಆದರೆ ಈ ಹಿಂದೆ ಪ್ರಸ್ತಾಪಿಸಿದಂತೆ, ಸಮುದಾಯ, ವರ್ಗಗಳ ಆಶಯಗಳಿಗೆ ತಕ್ಕಂತೆ ಬಳಕೆಯಲ್ಲಿದ್ದವು. ಜೊತೆಗೆ ತನ್ನದೇ ಆದ ಸ್ವರೂಪವನ್ನು ಪಡೆದಿವೆ. ಸಾಮಾಜಿಕ ಮಾನವಶಾಸ್ತ್ರ, ಸಾಂಸ್ಕೃತಿಕ ಅಧ್ಯಯನಗಳ ಪ್ರಕಾರ ತೆರ ಕನ್ಯಾಶುಲ್ಕ ಸಾಮಾನ್ಯವಾಗಿ ಆರ್ಥಿಕವಾಗಿ ದುರ್ಬಲವಾದ ಮಧ್ಯಮವರ್ಗ, ತಳ ಸಮುದಾಯದಲ್ಲಿ ಮತ್ತು ದುಡಿಯುವ ವರ್ಗದಲ್ಲಿ ಬಳಕೆಯಲ್ಲಿದೆ. ಮೊದಲಿಗೆ ತೆರ-ಕನ್ಯಾಶುಲ್ಕ ಕುರಿತು ಚಾರಿತ್ರಿಕ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಮೇಲ್ನೋಟಕ್ಕೆ ತೆರ, ಕನ್ಯಾಶುಲ್ಕ ಪದಗಳು ಬೇರೆ ಬೇರೆ ಆಗಿ ಕಂಡರೂ ಈ ಎರಡು ಪದಗಳನ್ನು ಮಧ್ಯಮವರ್ಗ ಮತ್ತು ತಳಸಮುದಾಯದಲ್ಲಿ ಮದುವೆ ಸಂದರ್ಭದಲ್ಲಿ ವರನ ಕಡೆಯವರು, ವಧುವಿನ ಕಡೆಯವರಿಗೆ ನೀಡುವ ಗೌರವಯುತ ಉಡುಗೊರೆ/ಕಾಣಿಕೆಯಾಗಿತ್ತು. ಇದರ ಸ್ವರೂಪವನ್ನು ತೆರೆದ ಕುರಿತಿರುವ ಉಲ್ಲೇಖಗಳನ್ನು ಅರ್ಥಮಾಡಿಕೊಳ್ಳಬಹುದು. ಉಪಸಂಸ್ಕೃತಿ ಅಧ್ಯಯನ ಭಾಗವಾಗಿ ನಡೆದ 'ಸೋಲಿಗರ ಸಂಸ್ಕೃತಿ' ಅಧ್ಯಯನ ಮಾಡಿದ ಡಾ. ಚಂದ್ರು ಕಾಳೇನಹಳ್ಳಿ ಪ್ರಕಾರ "ಮದುವೆಯ ಸಂದರ್ಭದಲ್ಲಿ ಕನ್ಯಾಶುಲ್ಕ ಕೊಡುವ ಬುಡಕಟ್ಟಿನ ಜನರಲ್ಲಿ ಈ ಪದ್ಧತಿ ಬಳಕೆಯಲ್ಲಿದೆ. ಸೋಲಿಗರಲ್ಲಿ ಹನ್ನೆರಡೂವರೆ ರೂಪಾಯಿಯನ್ನು ಕನ್ಯೆಯ ತಂದೆ ತಾಯಿಗಳಿಗೆ ನೀಡುತ್ತಿದ್ದರು. ಅವರ ವಾಡಿಕೆ ಈಚೆಗೆ ಕನ್ಯಾಶುಲ್ಕದ ದರ ಮೂವತ್ತು ರೂಪಾಯಿಗಳಿಗೆ ಏರಿದೆ. ಇದನ್ನೇ 'ತೆರ ಕಟ್ಟುವುದು' ಎಂದು ಅವರು ಕರೆಯುತ್ತಾರೆ ಎಂದು ಹೇಳುತ್ತಾರೆ" (ಚಂದ್ರು ಕಾಳೇನಹಳ್ಳಿ: ೧೯೯೩; ಪು. ೩೨). ದುರಗಮುರಗಿಯರ ಸಂಸ್ಕೃತಿಯನ್ನು ಅಧ್ಯಯನ ಮಾಡಿದ ಗೀತಾನಾಗಭೂಷಣ ಪ್ರಕಾರ "ಮದುವೆಯಲ್ಲಿ ಹೆಣ್ಣಿನ ಹೆತ್ತವರಿಗೆ ಗಂಡಿನ ಕಡೆಯವರು ತೆರ (ಕನ್ಯಾದಕ್ಷಿಣೆ) ಕೊಡುವ ಪದ್ಧತಿಯಿದೆ. ಮೊದಲೆಲ್ಲ ಹದಿನಾರು ಬೆಳ್ಳಿ, ರೂಪಾಯಿಗಳನ್ನು ತೆರವೆಂದು ಕೊಡುತ್ತಿದ್ದರು ಎಂದು ಹೇಳುತ್ತಾರೆ" (ಗೀತಾನಾಗಭೂಷಣ: ೧೯೯೩;ಪು.೫೩,೫೪). ಹಸಲರ ಸಂಸ್ಕೃತಿ ಅಧ್ಯಯನದಲ್ಲಿ ಜಿ. ಎಸ್. ಭಟ್ಟರು "ಈ ಸಂಸ್ಕೃತಿಯಲ್ಲಿ ಹಲವು ವಿವಿಧ ವಿವಾಹ ನಡೆಯುತ್ತದೆ. ಯಾವುದೇ ವಿವಾಹ ಆದರೂ ವಧುವಿನ ತಾಯಿ ತಂದೆಯವರಿಗೆ ತೆರ ಕೊಡುವ ಪದ್ಧತಿಯಿದೆ. ತಂದೆ ತಾಯಂದಿರು ಹೆಣ್ಣು ಮಕ್ಕಳನ್ನು ಸಾಕಿ ಸಲಹುವುದರಿಂದ ಅವರಿಗೆ ತೆರ ಅಥವಾ ವಧುದಕ್ಷಿಣೆ ಕೊಟ್ಟು ಮದುವೆಯಾದರೆ ಹೆಣ್ಣಿನಿಂದ ಗಂಡಿನ ಮನೆಯಲ್ಲಿ ಯಾವುದೇ ಕೆಲಸ ಮಾಡಿಸಬಹುದೆಂದು ಅವರು ಹೀಗೆ ಮಾಡುತ್ತಿದ್ದರು. ಹಿಂದೆ ೫೦ರೂಪಾಯಿಗಳಿಂದ ೨೦೦ ರೂಪಾಯಿಗಳವರೆಗೆ ತೆರ ಕೊಡಬೇಕಾಗಿತ್ತು. ಹಣಕ್ಕೆ ಬದಲಾಗಿ

ಎಂಟರಿಂದ ಹತ್ತು ಚೀಲ ಭತ್ತ ಕೊಡುವುದೂ ಉಂಟು. ಇದಲ್ಲದೆ ಸೀರೆ, ಆಭರಣಗಳನ್ನು ಪ್ರತ್ಯೇಕವಾಗಿ ಕೊಡಬೇಕು. ತುಳುಹಸಲರಲ್ಲಿ ಹಿಂದೆ ವಧುದಕ್ಷಿಣೆ ೧೨ರೂ ಇತ್ತೆಂದು ಹೇಳಲಾಗಿದೆ. ಒಂದು ಮುಡಿ ಅಕ್ಕಿ, ಒಂದು ಮುಡಿ ಭತ್ತ, ಜೊತೆಗೆ ಕಂಚಿನ ಬಳೆ, ಕಂಚಿನ ತಾಳಿ ಮತ್ತಿತರ ಉಡುಪುಗಳು, ಆಭರಣಗಳು, ಕರಿಮಣಿಸರ ಮತ್ತು ಒಂದು ಉಂಗುರ ಕೊಡಬೇಕು. ಗಂಡಿನ ಕಡೆಯವರು ಬೆಳ್ಳಿ ಗೆಜ್ಜೆ ಪಟ್ಟಿ, ಚಿನ್ನದ ಬೆಂಡೋಲೆ, ಬುಗುಡಿ, ಕಾಲುಂಗುರ, ತಲೆಗೆ ಚಿನ್ನದ ಹೂ ನೀಡಬೇಕು. ಇದಲ್ಲದೆ ಬೆಳ್ಳಿ ಕೋಲ್ಕಡಗ, ಎರಡು ದುಂಡುಸೀರೆ ಕೊಡಬೇಕು. ಸೊರಬ ತಾಲ್ಲೂಕಿನ ಹಸಲರಲ್ಲಿ ವಧುವಿಗೆ ಕೊಡಬೇಕಾದ ತೆರ ಆರು ವರಹ (೨೪ ರೂಪಾಯಿ) ಮೂರು ಕ್ವಿಂಟಾಲ್ ಭತ್ತ ಮತ್ತಿತರ ಆಭರಣಗಳು, ಕುಂಶಿಯಲ್ಲಿ ಹತ್ತು ಚೀಲ ಭತ್ತ, ಒಂದು ನೂರು ರೂಪಾಯಿಗಳ ತೆರ, ತಾಳಿ, ಬಾಸಿಂಗ, ತೊಂಡಿಲು ಇವನ್ನೆಲ್ಲ ಗಂಡಿನ ಕಡೆಯವರೇ ಮಾಡಿಸಬೇಕು. ಕುಂದಾಪುರದ ಹಸಲರಲ್ಲಿ ತೆರಕೊಡುವುದು 'ನಂಬುಗೆಯ ಶಾಸ್ತ್ರ'ದ ಸಂದರ್ಭದಲ್ಲಿ ಇದು ೧೨ ರೂಪಾಯಿ ಆಗಿತ್ತು. ತೆರ ಕೊಡದೆ ತಂದಂಥ ಹೆಣ್ಣಿನ ಕೈಯಲ್ಲಿ ಮನೆಯ ಸಗಣಿಯನ್ನು ತೆಗೆಸಬಾರದೆಂಬ ನಂಬುಗೆ ಹಸಲರದು" (ಭಟ್ಟ ಜಿ.ಎಸ್:೧೯೯೩; ಪು.೩೫–೩೬).

ಈಶ್ವರ್ ಎನ್. ಜೋಷಿಯವರು ದಕ್ಷಿಣ ಕನ್ನಡದ ಕುಡುಬಿಯವರು ಎಂಬ ಅಧ್ಯಯನದಲ್ಲಿ ಕನ್ಯಾಶುಲ್ಕ ಕುರಿತು ಹೀಗೆ ಮಾಹಿತಿ ನೀಡುತ್ತಾರೆ. "ಈಗಲೂ ಸಹ ಹೆಣ್ಣಿನ ತಂದೆ ತಾಯಿಯರಿಗೆ ತೆರ ಕೊಟ್ಟು (ಕನ್ಯಾಶುಲ್ಕ) ಮನೆ ತುಂಬಿಸಿಕೊಳ್ಳುವ ಪದ್ಧತಿ ಇದೆ. ವರವಧುವಿನ ತಂದೆ ತಾಯಿಯರಿಗೆ ಕೇವಲ ಐದು ಸೀರೆ, ರವಿಕೆ ಮತ್ತು ಕೆಲವು ನಾಣ್ಯ (ವರಹ) ಕೊಡಬೇಕು. ಹಿರಿಯರು ಮದುವೆಯ ದಿನವನ್ನು ನಿಶ್ಚಯಿಸುವರು. ಇಲ್ಲಿ ಬ್ರಾಹ್ಮಣ ಪುರೋಹಿತರ ಅಗತ್ಯತೆ ಇವರಿಗೆ ಇಲ್ಲವೆ ಇಲ್ಲ. ಮದುವೆಯ ಹಿಂದಿನ ರಾತ್ರಿ ವರನ ಮನೆಯವರು ವಧುವಿನ ಮನೆಗೆ ಹೋಗುತ್ತಾರೆ. ಮದುವೆಯ ದಿನದಂದು ವಧು ಹೊಸ ಸೀರೆ, ರವಿಕೆಯನ್ನು ತೊಟ್ಟು, ಸಿಂಗಾರದ ಹೂವಿನಿಂದ ಅಲಂಕರಿಸಿಕೊಳ್ಳುವರು. ವರನಿಗೆ ಮಾವ ಬಳುವಳಿಯಾಗಿ ಏಣಿಕೆ, ಕತ್ತಿ, ಬಳ್ಳಿ (ಹಗ್ಗ) ಗೆರೆಸೆ, ಮಣ್ಣಿನ ಮಡಕೆ ಮತ್ತು ಬೇಟೆಯ ಬಲೆ ಮುಂತಾದವುಗಳನ್ನು ಕೊಡುವ ಪದ್ಧತಿ ಇದೆ ಎಂದು ಹೇಳುತ್ತಾರೆ" (ಈಶ್ವರ್.ಎನ್.ಜೋಷಿ:೧೯೮೩; ಪು.೨೦ರಿಂದ೨೩).

ಒಟ್ಟಿನಲ್ಲಿ ಈ ಮೇಲಿನ ಉಲ್ಲೇಖಗಳನ್ನು ಗಮನಿಸಿದಾಗ, ಪ್ರಾಚೀನ ಕಾಲದಲ್ಲಿನ ತಳ ಸಮುದಾಯ / ದುಡಿಯುವ ವರ್ಗಗಳಲ್ಲಿ ತೆರ / ಕನ್ಯಾಶುಲ್ಕ ಪದ್ಧತಿ ಜಾರಿಯಲ್ಲಿದೆ. ಅದು ಹಣ ಮತ್ತು ವಸ್ತುಗಳ ರೂಪದಲ್ಲಿತ್ತು. ಅಂದರೆ ಕಾಳು, ಅಥವಾ ಜೋಳ, ಅಕ್ಕಿ ಇರಬಹುದು. ಸಾಕು ಪ್ರಾಣಿಗಳ ರೂಪದಲ್ಲಿ ಹಸು, ಎಮ್ಮೆ, ಕುರಿ ಇರಬಹುದು. ಇವುಗಳನ್ನು ವರನ ಕಡೆಯವರು

ವಧುವಿನ ಕಡೆಯವರಿಗೆ ಕೊಡುವ ವಾಡಿಕೆ ಇತ್ತು. ಈ ತರಹದ ತೆರ ಕನ್ಯಾಶುಲ್ಕ ಈ ವಿವಾಹ ಸಮಾರಂಭಕ್ಕೆ ಮಾತ್ರ ಸೀಮಿತವಾಗಿತ್ತು. ಇವುಗಳು ಅನುಭೋಗಿಸುವ ವಸ್ತುಗಳಾಗಿದ್ದವು ವಿನಃ ಹೆಣ್ಣಿನ ಕುಟುಂಬದವರು ಆಸ್ತಿಯಾಗಿರುವಂತಹ ವಸ್ತುಗಳು ಆಗಿರಲಿಲ್ಲ. ಅಂದರೆ ಅದು ಮೌಲ್ಯಯುತ ಆಸ್ತಿ ಆಗಿರಲಿಲ್ಲ ಎಂಬುದಂತು ಸ್ಪಷ್ಟವಾಗಿದೆ. ಜೊತೆಗೆ ಗೀತಾನಾಗಭೂಷಣರವರು 'ತೆರ' ಎನ್ನುವ ಬಿಕ್ಕಟ್ಟಿನಲ್ಲಿ ಉಡುಪು, ಮತ್ತು ಪೂಜೆಗೆ ಅಗತ್ಯವಾದ ವಸ್ತುಗಳನ್ನು ದಾಖಲಿಸುತ್ತಾರೆ. ಅದರ ಅರ್ಥ ಪೂಜೆ ಎಂಬುದು ದೇವರ ಮೇಲಿನ ನಂಬಿಕೆಯಂತೆ ಈ ಜನರು ಪೂಜೆಗೆ ಅಗತ್ಯವಾದ ವಸ್ತುಗಳನ್ನು ಈ ಕಾರ್ಯಕ್ರಮಕ್ಕೆ ಅಗತ್ಯವಾದ ಉಡುಪುಗಳನ್ನು ತರಲಿಕ್ಕೆ ಬದ್ಧರಾದರೆ ಮಾತ್ರ ತೆರ ಸ್ವೀಕಾರವಾಗುತ್ತವೆ ಎಂಬ ನಿರ್ಧಾರದ ಹಿನ್ನೆಲೆಯಲ್ಲಿ ಈ ಸಂಗತಿಗಳನ್ನು ದಾಖಲಿಸುತ್ತಾರೆ, ವಿನಃ ಉಡುಪು ಮತ್ತು ಪೂಜೆಸಾಮಾನುಗಳು 'ತೆರ ಕನ್ಯಾಶುಲ್ಕ' ಅಂತ ಅರ್ಥಕೊಡುವ ನೆಲೆಯಿಂದ ದಾಖಲಿಸಿಲ್ಲ.

"ಮುಸಲ್ಮಾನರಲ್ಲಿ ಪುರುಷ ಅಥವಾ ವರ ವಧುವಿಗೆ 'ಮಹರ್' ಅನ್ನುವ ತೆರಕೊಡುವ ಪದ್ಧತಿ ಇತ್ತು. 'ಮಹರ್' ಉರ್ದು ಭಾಷೆಯ ಮಹರದಿಂದ ಬಂದಿದೆ. ಆರ್ಥಿಕ ದುರ್ಬಲರಾದ ದುಡಿಯುವ ಶ್ರಮಿಕರಲ್ಲಿ ಈ ಪದ್ಧತಿ ಬಳಕೆಯಲ್ಲಿದ್ದು ಇದಕ್ಕೆ ತೆರ ಅಥವಾ ಕನ್ಯಾಶುಲ್ಕ ಎಂಬ ಅರ್ಥ ಬರುತ್ತದೆ. ಮೆಹರನ ಮೊತ್ತ ಇಂತಿಷ್ಟೇ ಇರಬೇಕೆಂದು ಮೊದಲೇ ನಿಗದಿಪಡಿಸಿ ಕೊಂಡಿರಲಾಗುತ್ತದೆ. ವಿವಾಹ ಸಂದರ್ಭದಲ್ಲಿ ಒಂದಿಷ್ಟು ಮತ್ತು ಆನಂತರ ಉಳಿದುದನ್ನು ಕೊಡಬಹುದಾಗಿರುತ್ತದೆ" (ಭೈರಪ್ಪ. ಕೆ:೧೯೯೬; ಪು.೪೭೮. ೪೭೯).

"Dahej or Hunda" ಪ್ರಕಾರ "ವರದಕ್ಷಿಣೆ ಮತ್ತು ವಧುದಕ್ಷಿಣೆ ನಡುವೆ ಇರುವ ಪ್ರಧಾನ ಲಕ್ಷಣವೆಂದರೆ ವರದಕ್ಷಿಣೆಯು ಶ್ರೀಮಂತರ ಕುಟುಂಬದಲ್ಲಿ ಅಧಿಕವಾಗಿದ್ದರೆ, ವಧುದಕ್ಷಿಣೆಯು ಪರಿಶಿಷ್ಟ ಪಂಗಡ ಮತ್ತು ಕೆಳಜಾತಿಯಲ್ಲಿ ಪ್ರಧಾನವಾಗಿ ಕಾಣಬಹುದು. ಆದರೆ ನಾವು ಲಕ್ಷಣವನ್ನು ಮನಗಾಣದೆ ಈ ವ್ಯವಸ್ಥೆಯು ಸಮಾಜದಲ್ಲಿ ಏಕೆ ಹುಟ್ಟಿಕೊಂಡಿತು ಎಂಬುದಾಗಿ ಚರ್ಚಿಸಬೇಕಾಗಿದೆ. ಜಾತಿಯ ವಿಭಜನೆಯಲ್ಲಿ ದೈಹಿಕ ಕಾರ್ಯಗಳಲ್ಲಿ ಮತ್ತು ಕಠಿಣಕಾರ್ಯಗಳಲ್ಲಿ ತೊಡಗುವ ವೈಶ್ಯ ಮತ್ತು ಶೂದ್ರರಲ್ಲಿಯೇ ಹಲವಾರು ಜಾತಿಯ ವಿಭಜನೆಗಳು ಕಂಡುಬರುತ್ತದೆ. ಆದರೆ ಮೇಲ್ವರ್ಗವಾದ ಬ್ರಾಹ್ಮಣ ಮತ್ತು ಕ್ಷತ್ರಿಯರು ವೈದಿಕ ಕಾರ್ಯಗಳಲ್ಲಿ ಮತ್ತು ಪರಾಕ್ರಮದ ಕಾರ್ಯಗಳಲ್ಲಿ ತೊಡಗಿರುವುದರಿಂದ ಇದರಲ್ಲಿ ಯಾವುದೇ ಜಾತಿಯ ವಿಭಜನೆಗಳು ಅಥವಾ ತಮ್ಮ ಕಾರ್ಯಕ್ಕೆ ಸಂಬಂಧಪಟ್ಟ ವಿಭಜನೆಗಳು ಕಂಡುಬರುವುದಿಲ್ಲ" (Sudheer Bandarkar: Vivaaha-Org-New P.13 htm) ಎಂದು ಅಭಿಪ್ರಾಯ ಪಟ್ಟಿದ್ದಾರೆ.

**ವಧುದಕ್ಷಿಣೆ**

ತಳ ಸಮುದಾಯದಲ್ಲಿ ತೆರ, ಕನ್ಯಾಶುಲ್ಕ ಬಳಕೆಯಲ್ಲಿರುವುದು ತಿಳಿಯುತ್ತದೆ. ಆದರೆ ವಧುದಕ್ಷಿಣೆ ಎನ್ನುವಂತಹದ್ದು ಮೇಲುವರ್ಗ, ಮಧ್ಯಮಮೇಲ್ವರ್ಗದಲ್ಲಿ ಬಳಕೆಯಲ್ಲಿದ್ದು ಮದುವೆ ಸಂದರ್ಭದಲ್ಲಿ ವರನ ಕಡೆಯವರು ಹಾಗೂ ವಧುವಿನ ಕಡೆಯವರು ವಧುವಿಗೆ ನೀಡುವ ಉಡುಗೊರೆಯನ್ನು ವಧುದಕ್ಷಿಣೆ ಎಂದು ಕರೆಯಬಹುದು. "ಭಾರತದೊಳಗಿನ ಪಿತೃರೂಪಿ ಸಂಸ್ಕೃತಿಯಲ್ಲಿ ಹೆಣ್ಣು ವಿವಾಹದೊಂದಿಗೆ ಹುಟ್ಟಿದ ಮನೆಯ ಎಲ್ಲ ಅಧಿಕಾರ ಹಕ್ಕುಗಳನ್ನು ಕಳೆದುಕೊಂಡು ಹೊರಗಾಗುತ್ತಾಳೆ ಎನ್ನುವುದು ಹೆಣ್ಣಿನ ಬದುಕಿಗಿರುವ ಅರ್ಥವನ್ನು ಹೇಳುತ್ತದೆ. ಹೀಗೆ ವಿವಾಹ ಕಾಲದಲ್ಲಿ ಮಗಳನ್ನು ಗಂಡನ ಮನೆಗೆ ಒಪ್ಪಿಸುವಾಗ ತಂದೆಯಾದವನು ಪ್ರೀತಿಯ ಬಳುವಳಿಯಾಗಿ ಧನ, ಕನಕ, ವಸ್ತು, ಒಡವೆಗಳನ್ನು ಮಗಳಿಗೆ ಸ್ವ-ಇಚ್ಛೆಯಿಂದ ನೀಡುತ್ತಿದ್ದರು" (ಗಾಯತ್ರಿ ನಾವಡ:೨೦೦೩;ಪು.೧೭೮) ಎಂದು ಹೇಳುತ್ತಾರೆ. ಈ ಬಗೆಗೆ ಗಾಯತ್ರಿ ನಾವಡ ಹೀಗೆ ಅಭಿಪ್ರಾಯ ಪಡುತ್ತಾರೆ. ಅಧ್ಯಯನ ಗಮನಿಸಿದಾಗ ಕನ್ಯಾಪಿತೃಗಳು ಮಗಳನ್ನು ವಿವಾಹ ಮಾಡಿಕೊಟ್ಟು ಆಕೆಯನ್ನು ಮೊದಲ ಬಾರಿಗೆ ಗಂಡನ ಮನೆಗೆ ಕಳುಹಿಸುವಾಗ ಆಕೆಯೊಂದಿಗೆ ಬಹು ಪ್ರೀತಿಯಿಂದ 'ಬಳುವಳಿ'ಯಾಗಿ ಸಾಕಷ್ಟು ಹಣ, ಒಡವೆ, ದಾಸಿಯರು, ಹಸು, ಕರುಗಳು, ಪಾತ್ರೆಗಳು, ವಾಹನಗಳು ಮುಂತಾದವುಗಳನ್ನು ಕೊಟ್ಟು ಕಳುಹಿಸುವ ಕ್ರಮವಿತ್ತು. ಈ ಬಗ್ಗೆ ವರನ ಕಡೆಯಿಂದ ಯಾವುದೇ ಬೇಡಿಕೆ ಬಾರದೇ ಇದ್ದರೂ ತಾವಾಗಿಯೇ ಪ್ರೀತಿಯಿಂದ ಕೊಡುತ್ತಿದ್ದರು. ಈ ಬಗ್ಗೆ ನಮ್ಮ ಸಂಸ್ಕೃತ ಸಾಹಿತ್ಯದಲ್ಲಿ ಸಾಕಷ್ಟು ನಿರ್ದೇಶನಗಳಿವೆ. ರಾಮಾಯಣದಲ್ಲಿ ಬರುವಂತಹ ಮಿಥಿಲೆಯ ರಾಜ ಜನಕ ಮಹಾರಾಜನ ಮಗಳು ಸೀತೆಯ ವಿವಾಹವು ಶ್ರೀರಾಮನೊಂದಿಗೆ ನಡೆದಾಗ ಆಕೆಯೊಂದಿಗೆ ಧನ-ಕನಕ, ವಸ್ತು, ವಾಹನಾಧಿಗಳನ್ನು, ಮುತ್ತು, ರತ್ನ, ಚಿನ್ನ, ಮಾಣಿಕ್ಯ ಸ್ತ್ರೀ-ಪುರುಷ ಸೇವಕರನ್ನು ಅಲಂಕೃತ ಆನೆ, ಕುದುರೆ, ರಥ ಮುಂತಾದವುಗಳನ್ನು ಕೊಟ್ಟು ಕಳುಹಿಸಿದ್ದುದನ್ನು ಪುರಾಣಗಳಲ್ಲಿ ಕಾಣಬಹುದು.

"ಅರಸು ಮನೆತನದ ವಧುಗಳು ಒಂದು ನೂರು ಆಕಳುಗಳನ್ನು ಕಾಣಿಕೆ ರೂಪದಲ್ಲಿ ಗಂಡನ ಮನೆಗೆ ತರುತ್ತಿದ್ದರೆಂದು 'ಅಥರ್ವವೇದ'ದಲ್ಲಿ ಪ್ರಾಸಂಗಿಕವಾಗಿ ಉಲ್ಲೇಖಿಸಲಾಗಿದೆ. ದ್ರೌಪದಿ, ಸುಭದ್ರ ಮತ್ತು ಉತ್ತರೆಯರು ತಮ್ಮ ತವರು ಮನೆಯಿಂದ ಅನೇಕ ಆನೆಗಳನ್ನು, ಕುದುರೆಗಳನ್ನು ಮತ್ತು ಮುತ್ತು ರತ್ನಗಳನ್ನು ಹೇರಳವಾಗಿ ಕಾಣಿಕೆಯಾಗಿ ತಂದಿದ್ದರು. ಆದರೆ ಇಂಥ ಕಾಣಿಕೆಗಳು ಇಂದಿನ ಅರ್ಥದಲ್ಲಿ ವರದಕ್ಷಿಣೆಗಳಾಗಿರಲಿಲ್ಲ. ಏಕೆಂದರೆ ಅವುಗಳನ್ನು ಯಾವ ಒತ್ತಾಯವಿಲ್ಲದೆಯೇ, ಪ್ರೀತಿ ಒಲವುಗಳ ಧ್ಯೋತಕವಾಗಿ ಕೊಟ್ಟಂತವುಗಳಾಗಿದ್ದವು" (ಮುಳಗುಂದ ಹೆಚ್.ವಿ. ನಾಗೇಶ. ಹೆಚ್.ವಿ:೧೯೮೬; ಪು. ೮೩)

ಮುಂದೆ ಮಧ್ಯಕಾಲಿನ ಯುಗದಲ್ಲಿ ಇದೇ ಪರಂಪರೆ ಶ್ರೀಮಂತರಲ್ಲಿ, ರಾಜಮನೆತನಗಳಲ್ಲಿ ಮುಂದುವರೆದಿದ್ದು ಅನೇಕ ಉಲ್ಲೇಖಗಳಿವೆ. "ರಾಜಾಭಗವಾನ್‌ದಾಸ್ ಜೈಪುರದ ದೊರೆ, ತನ್ನ ಮಗಳು ಜೋದುಬಾಯಿಯನ್ನು ಅಕ್ಬರನ ಮಗ ಜಹಾಂಗೀರನಿಗೆ ಧಾರೆಯೆರೆದು ಕೊಟ್ಟನು. ಬಂಗಾರ, ಮುತ್ತು-ರತ್ನಗಳು, ವಜ್ರಗಳು, ಬೆಲೆಯುಳ್ಳ ಮತ್ತು ನಯನಾಜೂಕಿನ ವಸ್ತುಗಳು, ನೂರು ಆನೆ-ಕುದುರೆಗಳು, ಪುರುಷ ಮತ್ತು ಸ್ತ್ರೀ ಗುಲಾಮರನ್ನು ಕಾಣಿಕೆಗಳಾಗಿ ಮಗಳೊಂದಿಗೆ ಕಳುಹಿಸಿದ. ಇಸ್ಲಾಂ ದೊರೆಯಲ್ಲಿಯೇ ಹೆಸರು ಮಾಡಿದ ಔರಂಗಜೇಬನು ಸಹ ತನ್ನ ಮಗ ಸುಲ್ತಾನ್ ಮಹಮ್ಮದ್‌ನ ವಿವಾಹವನ್ನು ಚೋಳ ರಾಜಕುಮಾರಿಯೊಂದಿಗೆ ಮದುವೆ ಮಾಡುವಾಗ ಬಳುವಳಿಯಾಗಿ ರಾಮಗಿರಿ ಕೋಟೆಯನ್ನು ಪಡೆದನು" (ಮುಳಗುಂದ. ಹೆಚ್. ವಿ, ನಾಗೇಶ. ಹೆಚ್.ವಿ:೧೯೮೬;ಪು.೮೩-೮೪).

ಒಟ್ಟಿನಲ್ಲಿ ತಳಸಮುದಾಯ ಮತ್ತು ದುಡಿಯುವ ವರ್ಗದಲ್ಲಿ ತೆರ, ಕನ್ಯಾಶುಲ್ಕ ಬಳಕೆಯಲ್ಲಿದ್ದು ಅದು ಮೌಲ್ಯಯುವಾಗಿರದ ಅನುಭೋಗಿ ನೆಲೆಯನ್ನು ಹೊಂದಿದ್ದರೆ, ವಧುದಕ್ಷಿಣೆಯು ಮೇಲ್ವರ್ಗ, ಮಧ್ಯಮೇಲ್ವರ್ಗದಲ್ಲಿ ಬಳಕೆಯಲ್ಲಿರುವುದು ಪದ್ಧತಿಯಾಗಿದೆ. ವಧುದಕ್ಷಿಣೆ ಮೌಲ್ಯಯುತವಾಗಿದ್ದು ಅನುಭೋಗಿ ನೆಲೆಯಾಚೆ ಸ್ಥಿರ, ಚರಾಸ್ಥಿ ಆಗಿದ್ದರೆ, ಆದರೆ ಇದು ಪ್ರೀತಿ ಪೂರ್ವಕ ಉಡುಗೊರೆ ಎಂದು ಹೇಳಬಹುದು.

ವಿವಾಹ ಸಂದರ್ಭದಲ್ಲಿ ಕಾಣಿಸಿಕೊಳ್ಳುವ ಮತ್ತೊಂದು ಪದ್ಧತಿ ವರದಕ್ಷಿಣೆ ಇದು ವಸಾಹತುಶಾಹಿ ಸಂದರ್ಭದಲ್ಲಿ ಕಾಣಿಸಿಕೊಳ್ಳುವ ಪದ್ಧತಿಯಾಗಿದ್ದು, ಈ ಅವಧಿಯಲ್ಲಿನ ಬ್ರಿಟೀಷ್ ಆಡಳಿತವು ನೀಡದ ಇಂಗ್ಲೀಷ್ ಶಿಕ್ಷಣ ಭಾರತೀಯ ಸಮಾಜದಲ್ಲಿ ಹಲವು ಪರಿಣಾಮಗಳನ್ನು ಉಂಟುಮಾಡಿತ್ತು. ಈ ಸಮಾಜದಲ್ಲಿ ಹಲವು ವರ್ಗಗಳು ನಿರ್ಮಾಣಗೊಂಡವು. ಅಂತಹುದರಲ್ಲಿ ಮಧ್ಯಮವರ್ಗವು ಒಂದು ಈ ವರ್ಗದ ಜನರು ಹೆಣ್ಣು ಮಕ್ಕಳನ್ನು ತಮ್ಮ ಮನೆತನಕ್ಕೆ ಭಾರ ಎಂದು ಭಾವಿಸಿದ್ದು, ಅವಳು ಸುಖವಾಗಿರಬೇಕೆಂಬ ಆಶೆಯನ್ನು (ಆದರ್ಶನಾರಿಯರ) ಇಟ್ಟುಕೊಂಡಿದ್ದರು. ಈ ಹಿನ್ನೆಲೆಯಿಂದ ಮಧ್ಯಮವರ್ಗದ ಜನರು ತಮ್ಮ ವರ್ಗದ ವಿದ್ಯಾವಂತ ಯುವಕರಿಗೆ ತಮ್ಮ ಮಗಳನ್ನು ನೀಡಲು ಪೈಪೋಟಿ ನಡೆಸಿದರು. ಏಕೆಂದರೆ ಆ ವರ್ಗದ ವಿದ್ಯಾವಂತ ಸರಕಾರಿ ನೌಕರರ ಸಂಖ್ಯೆ ಕಡಿಮೆ ಇತ್ತು. ಈ ಹಿನ್ನೆಲೆಯಿಂದ ಮೇಲುವರ್ಗದ ಜನರು ಮದುವೆಯ ಸಂದರ್ಭದಲ್ಲಿ ವರನಿಗೆ ವಧುವಿನ ಕಡೆಯವರು ವರದಕ್ಷಿಣೆ ನೀಡಲು ಆರಂಭಿಸಿದರು. ಅಂದಿನಿಂದ ವರದಕ್ಷಿಣೆ ಸಮಾಜದಲ್ಲಿ ತನ್ನ ಅಸ್ತಿತ್ವ ಸ್ಥಾಪಿಸಿತ್ತು. ಅಂದು ಅವಶ್ಯಕತೆ ನೆಲೆಯಲ್ಲಿ ಕಾಣಿಸಿಕೊಂಡ ವರದಕ್ಷಿಣೆ ಇಂದು ಅನಿವಾರ್ಯ ಹಂತಕ್ಕೆ ಬಂದು ನಿಂತಿದೆ. ಇವನ್ನು ಮುಂದಿನ ಅಧ್ಯಯನದಲ್ಲಿ ಚರ್ಚಿಸಲಾಗುತ್ತದೆ.

ವಧುಶುಲ್ಕ ಮತ್ತು ವರದಕ್ಷಿಣೆ ಈ ಎರಡೂ ಪದ್ಧತಿಗಳಲ್ಲಿ ಸಂಪತ್ತನ್ನು ಮತ್ತೊಬ್ಬರಿಗೆ ಕೊಡುವ ಅಂಶವಿರುವುದನ್ನು ಗುರುತಿಸಬಹುದು. ಮೊದಲ ಕ್ರಮ, ಅಂದರೆ ವಧುಶುಲ್ಕ ಪದ್ಧತಿಯಲ್ಲಿ ಸಂಪತ್ತಿನ ಚಲನೆಯು ಹೆಚ್ಚು ಕಡಿಮೆ, ವಧುವಿನ ಚಲನೆಯ ವಿರುದ್ಧ ದಿಕ್ಕಿನಲ್ಲಿ ಸಂಭವಿಸುತ್ತದೆ. ಅಂದರೆ ಹಣ ಅಥವಾ ವಸ್ತುರೂಪದ ಕೊಡುಗೆಯನ್ನು, ಹುಡುಗಿಯನ್ನು ಸ್ವೀಕರಿಸುವವನು ಅರ್ಥಾತ್ ವರನು ಹುಡುಗಿಯ ತಂದೆಗೆ ಕೊಡುತ್ತಾನೆ. ಎರಡನೆಯ ಕ್ರಮ ಅಂದರೆ ವರದಕ್ಷಿಣೆಯ ಕ್ರಮದಲ್ಲಿ ಸಂಪತ್ತಿನ ಚಲನೆಯು ಹಣ ಅಥವಾ ವಸ್ತುವಿನ ರೂಪದಲ್ಲಿ ವಧುವಿನ ಚಲನೆಯ ದಿಕ್ಕಿನಲ್ಲಿಯೇ ನಡೆಯುತ್ತದೆ. ಮೇಲುನೋಟಕ್ಕೆ, ಈ ಎರಡೂ ಪದ್ಧತಿಗಳು ಪರಸ್ಪರ ವಿರುದ್ಧವೆಂದು ಕಂಡು ಬಂದರೂ ವಾಸ್ತವವಾಗಿ ಹಾಗಲ್ಲ. ಈ ಎರಡರ ನಡುವಿನ ಕೊಡುಕೊಳ್ಳುವಿಕೆಯ ಮೇಲಿನ ನಿಯಂತ್ರಣ ಪುರುಷರ ಅಧೀನಕ್ಕೆ ಒಳಪಟ್ಟಿದೆ ಎಂಬುದು ಸ್ಪಷ್ಟ. ಆದ್ದರಿಂದ ವರದಕ್ಷಿಣೆ ವಿರೋಧಿಸುವುದರ ಬದಲು ಅದರ ಮೇಲೆ ಅವಳ ಹಿಡಿತ ಇರಬೇಕು ಎನ್ನುವ ಹಿನ್ನೆಲೆಯಿಂದ ಸುಪ್ರಿಂಕೋರ್ಟ್ ೧೯೮೫ರಲ್ಲಿ ವರದಕ್ಷಿಣೆ 'ಸ್ತ್ರೀಧನ' ಆಗಬೇಕೆಂಬ ಆದೇಶ ನೀಡಿತ್ತು. ಆದರೆ ಇದು ಮಹಿಳೆಯರಿಗೆ ಶಕ್ತಿಯನ್ನು ಆರ್ಥಿಕ ಸಬಲೀಕರಣವನ್ನು ನಿರೀಕ್ಷಿತ ಮಟ್ಟದಲ್ಲಿ ನೀಡಲು ಸಾಧ್ಯವಿಲ್ಲ. ಹಾಗಾಗಿ ಸ್ತ್ರೀವಾದಿ ಚಿಂತಕಿ ಮಧುಕೀಶ್ವರ್‌ವರು ತಂದೆಯ ಪಿತ್ರಾರ್ಜಿತ ಆಸ್ತಿಯಲ್ಲಿ ಸಮಪಾಲು ಸಿಕ್ಕರೆ ವರದಕ್ಷಿಣೆ ತನ್ನಷ್ಟಕ್ಕೆ ತಾನೇ ಕಣ್ಮರೆಯಾಗುತ್ತದೆ ಎಂದು ಅಭಿಪ್ರಾಯಪಡುತ್ತಾರೆ.

**ಪ್ರಸ್ತುತದಲ್ಲಿ ವರದಕ್ಷಿಣೆ**

ವರದಕ್ಷಿಣೆಯನ್ನು ಕೊಡುವ ಈಗಿನ ಪದ್ಧತಿ, ವಧುವಿನ ತಂದೆ ತಾಯಿ ವರನಿಗೆ ಸ್ವ-ಇಚ್ಛೆಯಿಂದ ಕೊಡುವಂತಹದ್ದು ಅಲ್ಲ. ಜೊತೆಗೆ ಮಗಳ ಕಷ್ಟದ ದಿನಗಳಿಗೆ ನೆರವಾಗಲೆಂಬ ಉದ್ದೇಶದಿಂದ ನೀಡುವಂತಹದ್ದು ಅಲ್ಲ. ಮಗಳ ಮದುವೆಯನ್ನು ಮಾಡಲೇಬೇಕಾದ ಅನಿವಾರ್ಯತೆಯಲ್ಲಿರುವ ತಂದೆ ತಾಯಿಗಳು ತಮ್ಮ ಸಾಮರ್ಥ್ಯ ಮೀರಿ ಹಣ ಸಂಗ್ರಹಿಸಿ ಅಥವಾ ಸಾಲಮಾಡಿ ವರನ ಕಡೆಯವರ ಬೇಡಿಕೆಯನುಸಾರವಾಗಿ ವರದಕ್ಷಿಣೆ ಕೊಟ್ಟು ಮದುವೆ ಮಾಡುತ್ತಾರೆ. ಇದನ್ನು ಬಹಳಷ್ಟು ತಂದೆ ತಾಯಿಗಳು ಮಗಳಿಗೆ ಮದುವೆ ಮಾಡಿಕೊಡುವುದು ತಮ್ಮ ಜವಾಬ್ದಾರಿ ಎಂದು ಭಾವಿಸುತ್ತಾರೆ. ಈ ಕಾರಣಕ್ಕಾಗಿ ವರದಕ್ಷಿಣೆ ನೀಡುತ್ತಾರೆ.

ಪ್ರಸ್ತುತ ವರದಕ್ಷಿಣೆಯು ವಿವಾಹ ಸಂದರ್ಭದಲ್ಲಿ ಕೊಡಲೇಬೇಕಾದ ಉಡುಗೊರೆಯಾಗಿದೆ. ಇದು ಈ ಸಂದರ್ಭಕ್ಕೆ ಸೀಮಿತವಾಗಿರದೆ ವಿವಾಹದ ನಂತರವೂ ವರದಕ್ಷಿಣೆ ಬೇಡಿಕೆಯು ಬೇರೊಂದು ರೂಪದಲ್ಲಿ ಮುಂದುವರೆಯುತ್ತದೆ. ಇದಕ್ಕೆ ಹಲವು

ಸಾಮಾಜಿಕ ಸಂದರ್ಭಗಳಿಗೆ ವರದಕ್ಷಿಣೆ ಕಾರಣವಾಗಿದೆ. ಅಂದರೆ ಈ ಸಂದರ್ಭಗಳಲ್ಲಿ ವರದಕ್ಷಿಣೆ ಬೇಡಿಕೆಗಳು ವರನ ಅಥವಾ ಅವರ ಮನೆಯವರಿಂದ ಮುಂದುವರೆದಿದೆ. ವಿವಾಹದ ನಂತರ ವರದಕ್ಷಿಣೆ ಬೇಡಿಕೆಯನ್ನು ಉಂಟುಮಾಡುವ ಸಾಮಾಜಿಕ ಸಂದರ್ಭಗಳೆಂದರೆ, ಅಳಿಯನನ್ನು ಮನೆ ತುಂಬಿಸಿಕೊಳ್ಳುವಾಗ ಮಗನ ಮದುವೆಗೆ ಮಗಳನ್ನು/ಅಳಿಯನನ್ನು ಕರೆಯುವ ಸಂದರ್ಭ, ಮಗುವಿನ ತೊಟ್ಟಿಲು ಇಡುವಾಗ (ನಾಮಕರಣ) ಆಚರಣೆ ಇರಬಹುದು.

'ಪ್ರಜಾವಾಣಿ' ಪತ್ರಿಕಾ ವರದಿ ಪ್ರಕಾರ, "ಹೆಣ್ಣು ಹೆತ್ತ ತಂದೆ ತಾಯಿಗಳು, ಮಗಳು ಅವಿವಾಹಿತಳಾಗಿಯೇ ಉಳಿಯಬಹುದೆಂಬ ಭಯಕ್ಕಾಗಿ, ವಿವಾಹದ ಸಂದರ್ಭದಲ್ಲಿ ವರದಕ್ಷಿಣೆ ಕೊಡಲು ಒಪ್ಪುತ್ತಾರೆ. ವಿವಾಹ ಸಮಯದಲ್ಲಿ ತಮ್ಮಲ್ಲಿರುವಷ್ಟು ವರದಕ್ಷಿಣೆ ನೀಡಿ ವಿವಾಹ ಮಾಡಿ ಮುಗಿಸುತ್ತಾರೆ. ವಿವಾಹ ಸಂದರ್ಭದಲ್ಲಿ ಕೊಟ್ಟ ಆಶ್ವಾಸನೆಯಂತೆ ಬಾಕಿ ವರದಕ್ಷಿಣೆಯ ಭಾಗವನ್ನು ಕೊಡಲು ನಿಧಾನವಾದ ಸಂದರ್ಭದಲ್ಲಿ ಗಂಡ/ಆತನ ಮನೆಯವರು ಹುಡುಗಿಗೆ ಬಾಕಿ ವರದಕ್ಷಿಣೆ ತೆಗೆದುಕೊಂಡು ಬಾ ಎಂದು ಒತ್ತಾಯಿಸುತ್ತಾರೆ. ಅಥವಾ ಇದನ್ನೆ ಹಿನ್ನೆಲೆಯಾಗಿ ಇಟ್ಟುಕೊಂಡು ಕಿರುಕುಳ ನೀಡಲಾರಂಭಿಸುತ್ತಾರೆ. ವಿವಾಹ ನಂತರ ಹೊಸ ಬೇಡಿಕೆಗಳು ಕಾಣಿಸಿಕೊಳ್ಳಬಹುದು. ಈ ಬೇಡಿಕೆಗಳ ಪೂರೈಕೆಗಾಗಿ ಹುಡುಗಿಗೆ ದೈಹಿಕ/ಮಾನಸಿಕ ಹಿಂಸೆಗಳು ನೀಡಲಾಗುತ್ತದೆ. ಒಟ್ಟಿನಲ್ಲಿ ವರದಕ್ಷಿಣೆ ವಿವಾಹ ಕಾರ್ಯದ ನಂತರವು ಮುಂದುವರೆಯುತ್ತದೆ" (ಪ್ರಜಾವಾಣಿ:೦೨-೦೨-೨೦೦೭).

ಸಮೂಹ ಮಾಧ್ಯಮಗಳು ದಿನಬಳಕೆ/ಆಸ್ತಿಗಳ ಸಂಗ್ರಹ ಅನುಭೋಗ ವಸ್ತುಗಳಿಗೆ ಪೈಪೋಟಿ ತರಹದಲ್ಲಿ ಪ್ರಚಾರ ಮಾಡುತ್ತವೆ. ಇದರಿಂದ ಜನರು (ಸಮುದಾಯ/ವರ್ಗಗಳು) ಆಕರ್ಷಿತರಾಗುತ್ತಿದ್ದಾರೆ. ಈ ಪ್ರಕ್ರಿಯೆಯಿಂದಾಗಿ ವರನ ಕಡೆಯವರು ಬೈಕು, ಟಿ.ವಿ. ಫ್ರಿಜ್, ಕಾರು, ವಾಷಿಂಗ್‌ಮಿಷನ್ ಮತ್ತು ವಸತಿ ನಿವೇಶನಗಳಂತಹ ಸಂಗತಿಗಳನ್ನು ವರದಕ್ಷಿಣೆ ಬೇಡಿಕೆಗಳಾಗಿ ಮಾಡಿಕೊಳ್ಳುತ್ತಿದ್ದಾರೆ.

'ಪತ್ರಿಕಾಗಳಲ್ಲಿನ ವರದಕ್ಷಿಣೆ ವರದಿಗಳು ಒಳಗೊಂಡ ಸಂಗತಿಗಳೆಂದರೆ' ವರನು ಸರ್ಕಾರಿ ನೌಕರಿ ಅಥವಾ ಪ್ರಥಮದರ್ಜೆ ಅಧಿಕಾರಿ ಇದ್ದರೆ, ಡಾಕ್ಟರ್, ಇಂಜಿನೀಯರ್ ಆಗಿದ್ದರೆ ಆತನ ವರದಕ್ಷಿಣೆಯು ಬೆಲೆ ಅಧಿಕ. ಅಂದರೆ ಆತನಿಗೆ ವರದಕ್ಷಿಣೆ ಅಪಾರ ಮೊತ್ತದ ಹಣ ಆಭರಣಗಳನ್ನು ಕೊಡಬೇಕಾಗುವುದು ಅಲ್ಲದೆ ಆಧುನಿಕ ಐಷಾರಾಮಿ ವಸ್ತುಗಳಾದ ಕಾರು, ಫ್ರಿಜ್, ಟೆಲಿವಿಷನ್, ಸ್ಕೂಟರ್, ಏರ್‌ಕಂಡಿಷನ್‌ಗಳ ಇತ್ಯಾದಿಯಾಗಿ ವಸ್ತುಗಳನ್ನು ಕೊಡಬೇಕಾಗುತ್ತದೆ. ಕೆಲವು ಟಿ.ವಿ.ಸುದ್ದಿ ಪ್ರಕಾರ ವರದಕ್ಷಿಣೆ ವೈವಿಧ್ಯತೆಯಿಂದ ಕೂಡಿದೆ. ಅಂದರೆ ಮನೆ

ನಿವೇಶನಗಳನ್ನು ಕೇಳುವುದು, ಬೃಹತ್‌ನಗರ ವಸತಿ ಕೇಳುವುದು, ವಿದೇಶಿ ವರನ ಶಿಕ್ಷಣ ವೆಚ್ಚವನ್ನು ಭರಿಸುವುದು ಸಹ ವರದಕ್ಷಿಣೆ ಬೇಡಿಕೆಗಳಾಗಿವೆ.

ಈ ಮೇಲಿನ ಎಲ್ಲ ಅಧ್ಯಯನ ವರದಿಗಳನ್ನು ಅವಲೋಕಿಸಿದಾಗ ಪ್ರಸ್ತುತ ಸಮಾಜದಲ್ಲಿ ವರದಕ್ಷಿಣೆಗಾಗಿ ವಿವಿಧ ರೀತಿಯ ವಸ್ತುಗಳ ಬೇಡಿಕೆ ಇದೆ. ಆದರೂ ಆಭರಣಗಳ ಬಗೆಗಿನ ಬೇಡಿಕೆ ಮತ್ತು ಬಳಕೆ ಕಡಿಮೆ ಆಗಿಲ್ಲ. ಈ ಅಧ್ಯಯನದಲ್ಲಿ ಪ್ರಕರಣ ಕಂಡು ಬಂದ ಮಾಹಿತಿ ಪ್ರಕಾರ ಚಿನ್ನಕ್ಕೂ ಈಗಲೂ ಪ್ರಮುಖ ಸ್ಥಾನ ನೀಡಲಾಗಿದೆ. ಏಕೆಂದರೆ ಸಮಾಜದಲ್ಲಿ ಹೆಚ್ಚು ಭದ್ರತೆ ಮೌಲ್ಯವನ್ನು ಒದಗಿಸಬಲ್ಲ ಸಾಧನವಾಗಿ ಚಿನ್ನ ಈಗಲೂ ಗುರುತಿಸಿಕೊಂಡಿದೆ.

ವರದಕ್ಷಿಣೆ ಸಂಗತಿಗಳು ಮಾರುಕಟ್ಟೆಯ ವ್ಯಾಪಾರದ ಎಲ್ಲ ಲಕ್ಷಣಗಳನ್ನು ಹೊಂದಿದೆ. ಆರಂಭದಲ್ಲಿ ವರನಿಗೆ ಕೊಡಲಾಗುವ 'ಸಾಂಕೇತಿಕ ದಕ್ಷಿಣೆ' ಎಂದು ಪ್ರಾರಂಭದಲ್ಲಿ ಪರಿಗಣಿಸಲಾದ ಈ ಪದ್ಧತಿ ಇಂದು ಭಯಾನಕ ಸ್ವರೂಪ ತಳೆದಿದೆ. ಮಹಿಳೆಯ ಸ್ಥಾನಮಾನ ಕುರಿತ ಅಧ್ಯಯನ ಮಾಡಿದ ಸಮಿತಿಯ ಪ್ರಕಾರ ವರದಕ್ಷಿಣೆಯ ಮೊತ್ತ ಮತ್ತು ಹಾವಳಿ ನಿರಂತರವಾಗಿ ಏರುತ್ತಿದೆ ಎಂಬ ದೂರು ದೇಶದ ಎಲ್ಲ ಭಾಗಗಳಿಂದಲೂ ಕೇಳಿಬರುತ್ತಿದೆ. ಇದಕ್ಕೆ ಮೊದಲು ಈ ಪದ್ಧತಿ ಬಳಕೆಯಲ್ಲಿ ಇರದೆ ಇದ್ದ ಪ್ರದೇಶ ಮತ್ತು ಸಮುದಾಯಗಳಿಗೂ ಈ ಪದ್ಧತಿ ಹಬ್ಬುತ್ತದೆ ಎಂಬುದನ್ನು ಗಮನಿಸಬೇಕು. ವರದಕ್ಷಿಣೆಯ ತೀವ್ರತೆ, ವರನ ಸಾಮಾಜಿಕ ಆರ್ಥಿಕ ಸ್ಥಿತಿಗತಿಯನ್ನು ಅವಲಂಬಿಸಿರುವುದಲ್ಲದೆ ವಿವಿಧ ಪ್ರದೇಶಗಳಲ್ಲಿ ಮತ್ತು ವಿವಿಧ ಜಾತಿಗಳಲ್ಲಿ ಇದು ವ್ಯತ್ಯಾಸ ಹೊಂದಿರುತ್ತದೆ. ವಿವಿಧ ಉದ್ಯೋಗಗಳಲ್ಲಿರುವ ಪುರುಷರಿಗೆ ಹೆಚ್ಚು ಕಡಿಮೆ ಅಂಗೀಕೃತ ದರದ ವರದಕ್ಷಿಣೆಯ ಪಟ್ಟಿಯಿಂದ ಕಂಡುಬರುತ್ತದೆ. ಸಮಿತಿಯ ಅಧ್ಯಯನದ ಪ್ರಕಾರ, ಐ.ಎ.ಎಸ್. ಮತ್ತು ಐ.ಎಫ್.ಎಸ್. ಉದ್ಯೋಗದಲ್ಲಿರುವ ಅನುಕೂಲಸ್ಥ ಸಮುದಾಯಗಳಿಗೆ ಸೇರಿದ ಪುರುಷರು ಹಣ ಮತ್ತು ವಸ್ತುವಿನ ರೂಪದಲ್ಲಿ ಕನಿಷ್ಟ ಒಂದು ಲಕ್ಷ ರೂಪಾಯಿಗಳನ್ನು ನಿರೀಕ್ಷಿಸಬಹುದು. ವಾಣಿಜ್ಯ ಆಡಳಿತಾಧಿಕಾರಿಗಳು ಎರಡನೆಯ ಸ್ಥಾನವನ್ನು ಪಡೆದಿರುತ್ತಾರೆ. ಇಂಜಿನಿಯರ್ ಮತ್ತು ವೈದ್ಯರು ವಾಣಿಜ್ಯ ಆಡಳಿತಾಧಿಕಾರಿಗಳ ನಂತರದ ಸ್ಥಾನವನ್ನು ಪಡೆಯುತ್ತಾರೆ. ಈ ವರ್ಗದ ಜನರು, ವಿವಾಹವು ತಮಗೆ ಒಬ್ಬ ಸಂಗಾತಿಯನ್ನು ಒದಗಿಸಿ ಕೊಡುವುದಲ್ಲದೆ, ಆಧುನಿಕ ಸಂಸಾರವೊಂದನ್ನು ಪ್ರಾರಂಭಿಸಲು ಅವಶ್ಯವೆನಿಸುವ ಕಾರು, ಫ್ರಿಜ್, ಬಣ್ಣದ ಟಿ.ವಿ. ಇತ್ಯಾದಿ ಎಲ್ಲ ವಸ್ತುಗಳನ್ನು ಒದಗಿಸುತ್ತದೆ ಎಂದು ನಿರೀಕ್ಷಿಸುತ್ತಾರೆ. ಈ ಗುಂಪುಗಳು ಇತರರಿಗೆ ಆದರ್ಶವೆನಿಸುವ ಕಾರಣ, ಕೆಳಹಂತದ ಜನರ ಮೇಲೆ ಇವುಗಳ ಪ್ರಭಾವ ಉಂಟಾಗುವ ಸಾಧ್ಯತೆಯಿದೆ. ಅಂತೆಯೇ ಒಬ್ಬ ಜವಾನ ಅಥವಾ ಗುಮಾಸ್ತ ಇಂದು ಮೊಪೆಡ್, ಸೈಕಲ್, ಟ್ರಾನ್ಸಿಸ್ಟರ್ ಗಡಿಯಾರ ಇತ್ಯಾದಿ ವಸ್ತುಗಳನ್ನೂ ಮಧ್ಯಮ ವರ್ಗದಲ್ಲಿರುವ ಅಳಿಯನಿಗೆ

ಸ್ಕೂಟರನ್ನು ಕೊಡುಗೆಯಾಗಿ ಕೊಡುವುದು ಸಾಮಾನ್ಯವೆನಿಸಿದೆ. ಗ್ರಾಮೀಣ ಪ್ರದೇಶಗಳಲ್ಲಿಯೂ ಇದೇ ರೀತಿಯ ಬೇರೆಯ ಬೇಡಿಕೆಗಳು ಕೇಳಿ ಬರುತ್ತಿರುವುದಕ್ಕೆ ಈ ಅಧ್ಯಯನದ ಮಾಹಿತಿ ಸಾಕ್ಷಿ ಆಗಿದೆ.

ಹೆಣ್ಣುಮಕ್ಕಳಿಗೆ ಶಿಕ್ಷಣವನ್ನು ಕೊಟ್ಟಲ್ಲಿ ವರದಕ್ಷಿಣೆಯ ತೀವ್ರತೆಯು ಕಡಿಮೆಯಾಗಬಹುದು ಎಂಬ ಪ್ರಚಲಿತ ಅಭಿಪ್ರಾಯಕ್ಕೆ ವಿರುದ್ಧವಾಗಿ ಹೆಣ್ಣು ಮಕ್ಕಳ ಶಿಕ್ಷಣವು ಪರೋಕ್ಷವಾಗಿ ವರದಕ್ಷಿಣೆಯ ಸಮಸ್ಯೆಯನ್ನು ಹೆಚ್ಚಿಸಿದೆ. ಶಿಕ್ಷಿತ ಹುಡುಗಿಯು ತನಗಿಂತ ಹೆಚ್ಚು ಶಿಕ್ಷಿತ ಹುಡುಗನನ್ನು ನಿರೀಕ್ಷಿಸುತ್ತಾಳೆ. ತಂದೆ ತಾಯಿಗಳೂ ಇಂತಹದೇ ಅಭಿಪ್ರಾಯವನ್ನು ಹೊಂದಿರುತ್ತಾರೆ. ತಮಗಿಂತ ಹೆಚ್ಚು ಶಿಕ್ಷಣವನ್ನು ಪಡೆದಂತಹ ಹುಡುಗಿಯರನ್ನು ವಿವಾಹವಾಗಲು, ನವಯುವಕರೂ ಹಿಂಜರಿಯುತ್ತಾರೆ. ಅಂತೆಯೇ ಹೆಚ್ಚು ಶಿಕ್ಷಿತ ಹುಡುಗಿಯರೆಂದರೆ ಅವರಿಗಿಂತಲೂ ಹೆಚ್ಚು ಶಿಕ್ಷಿತ ಹುಡುಗರನ್ನು ಹುಡುಕಬೇಕಾಗುತ್ತದೆ ಎನ್ನುವುದು ಕೆಲವರ ಅಭಿಪ್ರಾಯ.

ಮಹಿಳಾ ಸ್ಥಾನಮಾನ ಅಧ್ಯಯನ ಮಾಡಿದ ಸಮಿತಿ ಪ್ರಕಾರ, "ವರದಕ್ಷಿಣೆ ಪದ್ಧತಿ ಸಮಾಜದ ಎಲ್ಲ ಸ್ತರ ಮತ್ತು ಸಮುದಾಯಗಳಲ್ಲಿ ಆವರಿಸಿದೆ. ವರದಕ್ಷಿಣೆ ಹೆಸರಲ್ಲಿ ಕೇಳಲಾಗುವ ಹಣ ವಸ್ತುಗಳ ಮೊತ್ತ ಒಂದು ಸಮುದಾಯದಿಂದ ಮತ್ತೊಂದು ಸಮುದಾಯಕ್ಕೆ ಭಿನ್ನವೆನಿಸಿದರೂ, ಎಲ್ಲ ಸಮುದಾಯಗಳಲ್ಲಿಯೂ ಒಂದಲ್ಲ ಒಂದು ರೀತಿಯಲ್ಲಿ ವರದಕ್ಷಿಣೆ ಕೊಡುಕೊಳ್ಳುವಿಕೆಯನ್ನು ನಡೆಯತ್ತದೆ ಎಂದು ಸಮಿತಿ ಹೇಳುತ್ತದೆ. ವರದಕ್ಷಿಣೆಯು ಈ ಅಧ್ಯಯನದಲ್ಲಿ ಕಾನೂನು ಬಾಹಿರವೆನಿಸಿದ್ದರೂ ಇದರ ಆಚರಣೆ ಸಮಾಜದ ಎಲ್ಲ ಸಮುದಾಯ ವರ್ಗಗಳಿಗೆ ವ್ಯಾಪಿಸಿರುವುದನ್ನು ಸಮಿತಿ ಖಂಡಿಸಿದೆ" (Report of National Committee on the status of women, 1974).

ಈ ಅಧ್ಯಯನದ ಪ್ರಕರಣಗಳಲ್ಲಿ ಕಂಡುಬರುವ ಮತ್ತೊಂದು ಸೂಕ್ಷ್ಮ ಸಂಗತಿಯೆಂದರೆ ಮಗಳು ಮದುವೆಗೆ ಸಿದ್ಧಳಾಗಿರುವಾಗ ತಂದೆ ತಾಯಿ ಧೋರಣೆ ಒಂದು ರೀತಿಯಾದರೆ, ಅದೇ ತಂದೆತಾಯಿಗಳು ಮಗನ ಮದುವೆಗೆ ಕನ್ಯೆ ಹುಡುಕಲು ತೊಡಗುವ ಧೋರಣೆ ಬೇರೆಯೆ ಆಗಿದೆ. ಅಂದರೆ ವರದಕ್ಷಿಣೆ ಬೇಕೆಂಬ ಧೋರಣೆ ಹೊಂದಿದ್ದಾರೆ. ಹಾಗಾಗಿ ಆಚರಣೆ ಮತ್ತು ಅಭಿಪ್ರಾಯಗಳ ನಡುವೆ ಕಂಡು ಬರುವ ವೈರುದ್ಯಗಳು, ದ್ವಂದನೀತಿ, ವರದಕ್ಷಿಣೆ ವ್ಯಾಪಕವಾಗಲು ಕಾರಣವಾಗಿದೆ. ಮಾಧ್ಯಮಗಳ ಸಮೀಕ್ಷೆ ಪ್ರಕಾರ "ಆಧುನಿಕ ಸಮಾಜದ ಸಾಮಾಜಿಕ ಮೌಲ್ಯಗಳು ಜನರಲ್ಲಿ ಐಷಾರಾಮಿ ವಸ್ತುಗಳಿಗಾಗಿ ಹೆಚ್ಚು ಸ್ಪರ್ಧೆಗೆ ಪ್ರೋತ್ಸಾಹವಿತ್ತಿವೆ. ವರದಕ್ಷಿಣೆಯ ಪದ್ಧತಿಗೆ

ಇದು ಮತ್ತೊಂದು ಪ್ರಚೋದಕ ಅಂಶವೆನಿಸಿದೆ. ಇದು ವಿವಾಹಪೂರ್ವ ಮತ್ತು ವಿವಾಹದ ನಂತರ ಮಹಿಳೆಯನ್ನು ಶೋಷಣೆಗೆ ಒಳಗಾಗಿಸಲು ಕಾರಣವಾಗಿದೆ. ಮಗಳ ವಿವಾಹದ ಸಂದರ್ಭವು ತಂದೆ ತಾಯಿಗೆ ಒಂದು ಅಗ್ನಿ ಪರೀಕ್ಷೆಯಿದ್ದಂತೆ. ಪೋಷಕರ ಆರ್ಥಿಕ ಸಾಮರ್ಥ್ಯಕ್ಕೂ ಮತ್ತು ವಿವಾಹಕ್ಕೂ ಸಂಬಂಧವಿರುವುದಿಲ್ಲ. ಆದರೂ ವರದಕ್ಷಿಣೆಯ ಬೇಡಿಕೆಯನ್ನು ತಂದೆ ತಾಯಿ ಹೇಗಾದರೂ ಪೂರೈಸುತ್ತಾರೆ. ಅದರ ಹೊರೆಯನ್ನು ನಂತರ ಹೇಗಾದರೂ ಭರಿಸಲು ಪ್ರಯತ್ನಸುತ್ತಾರೆ. ವರದಕ್ಷಿಣೆಯನ್ನು ಪಡೆಯದವರಿಗೆ ಕೊಡುವವರೇ ಇರುವುದಿಲ್ಲ" (ಉದಯವಾಣಿ: ನವೆಂಬರ್, ೨೦೦೭).

ಕ್ಷೇತ್ರಕಾರ್ಯದಲ್ಲಿ ಪಡೆದ ಮಾಹಿತಿ ಪ್ರಕಾರ ಒಂದು ಮನೆಯಲ್ಲಿ ಇತರ ಸೊಸೆಯಂದಿರು ತಂದಿರುವ ವರದಕ್ಷಿಣೆಯ ಮೊತ್ತದೊಂದಿಗೆ ಹೋಲಿಕೆಯೂ, ವರದಕ್ಷಿಣೆಯನ್ನು ಪಡೆಯಲು ಮತ್ತು ಕೊಡಲು ಪ್ರೇರಕವಾಗಿದೆ. ಒಬ್ಬ ಸೊಸೆ ತಂದ ವರದಕ್ಷಿಣೆಯನ್ನು ಇತರ ಸೊಸೆಯಂದಿರು ತರಬೇಕೆಂದು ಒತ್ತಾಯ ಮಾಡುತ್ತಾರೆ. ತರದಿದ್ದಲ್ಲಿ ಕಿರುಕುಳ ಕೊಡುವ ಅತ್ತೆ ಮಾವ ಒಂದು ಕಡೆಯಾದರೆ, ತಮ್ಮ ಘನತೆ ಪ್ರತಿಷ್ಠೆಗಾಗಿ ಮಗಳೊಂದಿಗೆ ಸಾಕಷ್ಟು ವರದಕ್ಷಿಣೆಯನ್ನು ಶಕ್ತಿಮೀರಿ ಕೊಡುವ ತಂದೆತಾಯಿಯೂ ಇನ್ನೊಂದೆಡೆ. ಇದರ ಪರಿಣಾಮವೆಂದರೆ ಎರಡು ಕಡೆಯವರು ತಮ್ಮದೇ ಪ್ರತಿಷ್ಠೆಯ ಕಾರಣಕ್ಕಾಗಿ ವರದಕ್ಷಿಣೆಯ ಸ್ಪರ್ಧೆಯಲ್ಲಿ ತೊಡಗುತ್ತಾರೆ.

ಮಹಿಳಾ ಸ್ಥಾನಮಾನ ಅಧ್ಯಯನ ಸಮಿತಿಯ ಪ್ರಕಾರ "ವಧುವಿನ ತಂದೆ ತಾಯಿಗಳಿಗೆ ಕೆಲವು ವಿದ್ಯಾರ್ಹತೆ ಮತ್ತು ಹುದ್ದೆಗಳ ಬಗ್ಗೆ ಅತಿಯಾದ ವ್ಯಾಮೋಹವಿದೆ. ಆದ್ದರಿಂದ ಅಂತಹ ಹುದ್ದೆಗಳಲ್ಲಿರುವ ಅಥವಾ ಡಿಗ್ರಿಗಳನ್ನು ಹೊಂದಿರುವ ಯುವಕರಿಗೆ ಹೆಚ್ಚಿನ ಬೇಡಿಕೆ ಕಂಡುಬರುತ್ತದೆ. ಅಂತಹ ವರನನ್ನು ಪಡೆದು ತಮ್ಮ ಅಳಿಯ ಇಂತಹ ಡಿಗ್ರಿ ಪಡೆದಿರುತ್ತಾರೆ ಅಥವಾ ಇಂತಹ ಹುದ್ದೆಯಲ್ಲಿ ಇದ್ದಾರೆ ಎಂದು ಹೇಳಿಕೊಳ್ಳುವುದೇ ಒಂದು ಹೆಮ್ಮೆಯ ವಿಷಯವಾಗಿದೆ. ಸಹಜವಾಗಿಯೆ, ಈ ವ್ಯಾಮೋಹದ ಬೇಡಿಕೆಗಳನ್ನು ಪರಿಸ್ಥಿತಿಯನ್ನು ಉಪಯೋಗಪಡಿಸಿಕೊಳ್ಳಲು ಇಚ್ಚಿಸಿ, ಅಂತಹ ಅರ್ಹತೆಯನ್ನು ಹೊಂದಿರುವ ವರನ ಮತ್ತು ಆತನ ತಂದೆತಾಯಿಗಳು ವರದಕ್ಷಿಣೆಯ ಮೊತ್ತವನ್ನು ಅಧಿಕವಾಗಿ ಕೇಳುತ್ತಾರೆ ಎಂದು ಹೇಳುತ್ತದೆ" (Report of National committee on the status of women in India 1974). ಗ್ರಾಮ ಮತ್ತು ನಗರ ಪ್ರದೇಶ ಇವೆರಡರಲ್ಲಿಯು ತಂದೆ ತಾಯಿಗಳು, ತಾವು ವರದಕ್ಷಿಣೆಯನ್ನು ಕೇಳುವುದಕ್ಕೆ ಹಲವು ಕಾರಣಗಳನ್ನು ನೀಡುತ್ತಾರೆ. ತಮ್ಮ ಹೆಣ್ಣು ಮಕ್ಕಳಿಗೆ ತಾವು ವರದಕ್ಷಿಣೆಯನ್ನು ಕೊಡಬೇಕಾಗಿರುವುದರಿಂದ ತಮ್ಮ ಗಂಡು ಮಕ್ಕಳ ವಿವಾಹದ ಸಂದರ್ಭದಲ್ಲಿ ವರದಕ್ಷಿಣೆಯನ್ನು ಪಡೆಯುವುದು ಅನಿವಾರ್ಯವಾಗಿದೆ ಎನ್ನುತ್ತಾರೆ. ತಮ್ಮ ಗಂಡುಮಕ್ಕಳ

ಶಿಕ್ಷಣದ ಮೇಲೆ ಖರ್ಚು ಮಾಡಿದ ಹಣವನ್ನು ಹಿಂದಕ್ಕೆ ಪಡೆಯಲು ಇಚ್ಚಿಸುವುದಾಗಿ ಎಂದು ಹೇಳುವವರು ಇದ್ದಾರೆ. ಈಗಿನ ಪರಿವರ್ತಿತ ಪರಿಸ್ಥಿತಿಯಲ್ಲಿ ಗಂಡು ಮಕ್ಕಳು ಬೇರೆ ಸಂಸಾರವನ್ನೇ ಹೂಡುತ್ತಾರೆ. ಆನಂತರ ತಮಗೆ ಮಕ್ಕಳಿಂದ ಯಾವ ನೆರವೂ ನೀಡುವುದಿಲ್ಲ, ಹಾಗಾಗಿ ವರದಕ್ಷಿಣೆ ಪಡೆಯುತ್ತಾರೆ. ಅಂತೆಯೆ ವಿವಾಹವೂ ಒಂದು ಮುಖ್ಯ ಸಂದರ್ಭ, ವರದಕ್ಷಿಣೆಯ ಮೂಲಕ ಆದಷ್ಟು ಪಡೆದು, ಮಕ್ಕಳ ಮೇಲೆ ಖರ್ಚು ಮಾಡಿದ ಹಣವನ್ನು ಹಿಂದಕ್ಕೆ ಪಡೆಯಬಹುದು ಎಂದು ಚಿಂತಿಸುವ ತಂದೆ ತಾಯಿಂದಿರು ಇದ್ದಾರೆ. ವರನ ಕಡೆಯಿಂದ ಕೇಳಲ್ಪಡುವ ವರದಕ್ಷಿಣೆಗೆ ಈ ಮೇಲಿನ ಕಾರಣಗಳು ಕಾರಣವಾದರೆ ವಧುವಿನ ಕಡೆಯಿಂದ ವರದಕ್ಷಿಣೆಗೆ ಕಾರಣಗಳು ಬೇರೆಯಾಗಿರುತ್ತವೆ. ಅವುಗಳೆಂದರೆ ಹುಡುಗಿಯ ಕಪ್ಪುಬಣ್ಣ, ಸೌಂದರ್ಯವಿಲ್ಲದಿರುವುದು, ಕುರೂಪಿತನ ಅಥವಾ ಇನ್ನಿತರ ನ್ಯೂನತೆ ಇತ್ಯಾದಿ ಹುಡುಗಿಯನ್ನು ಮದುವೆಯಾಗುವ ಸಂದರ್ಭಗಳು ಕಡಿಮೆ ಇರುತ್ತವೆ. ಇದರಿಂದಾಗಿ ಕೆಲವರಿಗೆ ವಿವಾಹ ತುಂಬ ನಿಧಾನವಾದರೆ ಇನ್ನೂ ಕೆಲವರಿಗೆ ವಿವಾಹ ಅಸಾಧ್ಯವೆನ್ನುವ ಪರಿಸ್ಥಿತಿಯೂ ಇದೆ. ಇಂತಹ ಪ್ರಕರಣಗಳಲ್ಲಿ ವರದಕ್ಷಿಣೆಯು ಸಹಾಯಕವಾಗುತ್ತದೆ. ಇಂದಿನ ಸಾಮಾಜಿಕ ವ್ಯವಸ್ಥೆಯಲ್ಲಿ ಆರ್ಥಿಕ ಅಸಮಾನತೆ ಹಾಗೂ ಸುಲಭವಾಗಿ ಮತ್ತು ಶೀಘ್ರವಾಗಿ ಹಣ ಸಂಪಾದನೆ ಮಾಡಬೇಕೆಂಬ ಪ್ರವೃತ್ತಿ, ಇವೆಲ್ಲವುಗಳೂ ಪರಸ್ಪರ ಪೂರಕವಾಗಿ ವರದಕ್ಷಿಣೆ ಪದ್ದತಿಯ ಆಚರಣೆಗೆ ಕಾರಣವಾಗಿದೆ.

**ಮಹಿಳೆಯ ಮೇಲೆ ದುಷ್ಪರಿಣಾಮ**

ವರದಕ್ಷಿಣೆ ಪದ್ಧತಿ ಮಹಿಳೆಯನ್ನು ಒಬ್ಬ ವ್ಯಕ್ತಿಯನ್ನಾಗಿ ಪರಿಗಣಿಸದೆ, ಮಾರಾಟದ ಒಂದು ವಸ್ತುವನ್ನಾಗಿ ನೋಡುತ್ತದೆ. ಈ ಒಂದು ಪ್ರಕ್ರಿಯೆಯಲ್ಲಿ, ಆಕೆಯ ಆತ್ಮಗೌರವಕ್ಕೆ ಧಕ್ಕೆ ತರುತ್ತದೆ. ಅಷ್ಟೆ ಅಲ್ಲ ಆಕೆಯ ವ್ಯಕ್ತಿತ್ವದ ಬೆಳವಣಿಗೆಯ ಮೇಲೆ ದುಷ್ಪರಿಣಾಮ ಬೀರುತ್ತದೆ. ವರದಕ್ಷಿಣೆ ಸಮಸ್ಯೆಗೂ ಹೆಣ್ಣಿನ ಹುಟ್ಟಿಗೂ ಸಂಬಂಧವೇರ್ಪಡುತ್ತದೆ. ಸಹೋದರರು ಮತ್ತು ಸಹೋದರಿಯರ ನಡುವೆ ತಾರತಮ್ಯ ಭಾವನೆ ಮತ್ತು ಪಕ್ಷಪಾತದ ನಡವಳಿಕೆಯಲ್ಲಿ ಇದು ವ್ಯಕ್ತವಾಗತೊಡಗುತ್ತದೆ. ಲಿಂಗಾಧಾರಿತ ಈ ತಾರತಮ್ಯ, ಸಮಾಜೀಕರಣದ ಪ್ರಾರಂಭದ ಹಂತದಲ್ಲಿರುವ ಬಾಲಕ ಬಾಲಕಿಯರ ಮನಸ್ಸಿನ ಮೇಲೆ ಅದರ ಪರಿಣಾಮ ಬೀರುವ ಸಾಧ್ಯತೆಗಳಿವೆ. ಇದು ಸಮಾಜಕ್ಕೆ ಮಾರಕವಾಗಬಲ್ಲಂತಹ ಅನಾರೋಗ್ಯಕರ ವಾತಾವರಣ ಸೃಷ್ಟಿಸುತ್ತದೆ. ವರದಕ್ಷಿಣೆಯ ಸಮಸ್ಯೆಯ ಒತ್ತಡ ಹೆಚ್ಚಿದಂತೆ ಹೆತ್ತವರ ಮನೆಯಲ್ಲಿ ಹೊರೆಯೆನಿಸಿ ಹಲವು ತಾರತಮ್ಯ ದೃಷ್ಟಿ ನಡವಳಿಕೆಗೆ ಗುರಿಯಾಗುವ ಹೆಣ್ಣು ಮಕ್ಕಳು ನಂತರ ಪತಿಯ ಮನೆಯಲ್ಲಿ ಮಾನಸಿಕ ಹಾಗೂ ದೈಹಿಕ ಕಿರುಕುಳಗಳಿಗೆ ಒಳಗಾಗುತ್ತಾಳೆ. ಹೀಗೆ ಎರಡೂ

ಮನೆಗಳಲ್ಲಿ ಮೊದಲಿಗೆ ಹೆತ್ತವರ ಮನೆಯಲ್ಲಿ ನಂತರ ಪತಿಯ ಮನೆಯಲ್ಲಿ ಹೆಣ್ಣು ತಾರತಮ್ಯದ ಕ್ರೂರ ನಡವಳಿಕೆಗೆ ಬಲಿಪಶುವಾಗುತ್ತಾಳೆ.

ವರದಕ್ಷಿಣೆ ಪದ್ಧತಿಯ ಮುಂದುವರೆಯುವಿಕೆಯು ಮಹಿಳೆಯ ಸ್ಥಾನಮಾನವನ್ನು ಕೆಳಗಿಳಿಸುತ್ತದೆ. ತಮ್ಮ ಮನೆಗಳಲ್ಲಿ ಹೆಣ್ಣು ಮಗುವಿನ ಜನನವನ್ನು ಜನರ ಮನಸ್ಸಿನಲ್ಲಿ ಸಂತೋಷ ಮತ್ತು ಅಸಮಾಧಾನಗಳಿಂದ ಪ್ರತಿಕ್ರಿಯಿಸುವಂತೆ ಮಾಡುತ್ತದೆ. ಸಾಮಾಜಿಕ ಮನ್ನಣೆಯನ್ನು ಪಡೆಯುತ್ತಿರುವ ಈ ಪದ್ಧತಿಯು ಸಮಾಜದ ಸತ್ವವನ್ನೇ ನಾಶಪಡಿಸುವುದಲ್ಲದೆ ಮಹಿಳೆಯ ಪ್ರಗತಿಗೆ ಪ್ರತಿಹಂತದಲ್ಲಿಯೂ ಅಡ್ಡಿಯೊಡ್ಡುತ್ತದೆ. ಹೆಣ್ಣುಮಕ್ಕಳ ಆರ್ಥಿಕ ಸ್ಥಿತಿಯನ್ನು ಅವಲಂಬಿಸಿ ಮತ್ತು ಕೆಳಮಟ್ಟದ ಸ್ಥಾನಮಾನವು ಆಕೆಗೆ ಸಂಬಂಧಿಸಿದ ಎಲ್ಲ ನಡವಳಿಕೆ ಮತ್ತು ಪದ್ಧತಿಗಳಲ್ಲಿ ವ್ಯಕ್ತಗೊಳ್ಳುತ್ತದೆ.

ವರದಕ್ಷಿಣೆ ಪದ್ಧತಿ ಮತ್ತು ಮಹಿಳೆಯ ಆರ್ಥಿಕ ಅವಲಂಬನೆಯ ಪರಿಸ್ಥಿತಿಯಿಂದಾಗಿ ಹೆಣ್ಣುಮಗುವಿನ ಜನನವನ್ನು ಅಸಂತೋಷ, ಅಸಮಾಧಾನದಿಂದ ಸ್ವಾಗತಿಸುವುದಷ್ಟೇ ಅಲ್ಲದೆ ಅನೇಕ ಸಂದರ್ಭಗಳಲ್ಲಿ ಹೆಣ್ಣು ಮಕ್ಕಳ ಜನನವನ್ನು ತಡೆಗಟ್ಟುವುದಕ್ಕಾಗಿ ಪ್ರೇರೇಪಿಸುತ್ತದೆ. ಮಗುವಿನ ಲಿಂಗವನ್ನು ಭ್ರೂಣ ಹಂತದಲ್ಲಿಯೇ ನಿರ್ಧರಿಸಿ ಅದು ಹೆಣ್ಣಾಗಿದ್ದ ಪಕ್ಷದಲ್ಲಿ ಗರ್ಭಪಾತ ಮಾಡಿಕೊಳ್ಳುವ ಅಂದರೆ ವರದಕ್ಷಿಣೆ ಗರ್ಭಪಾತ ಸಮಸ್ಯೆಯ ಸೃಷ್ಟಿಗೆ ಕಾರಣವಾಗಿದೆ. ಇಂತಹ ಪ್ರಕರಣಗಳು ಸ್ತ್ರೀ–ಪುರುಷರ ಅನುಪಾತದ ಮೇಲೂ ಪ್ರಭಾವ ಬೀರಬಲ್ಲದು. ಮನಃಪೂರ್ವಕವಾಗಿ ಸ್ವಾಗತಿಸಿದ ಒಬ್ಬ ವ್ಯಕ್ತಿಯಾಗಿ ಸಮಾಜವನ್ನು ಪ್ರವೇಶಿಸುವ ಹೆಣ್ಣು, ಜೀವನದುದ್ದಕ್ಕೂ ಹಲವು ಅಸಮಾನತೆಗಳಿಗೆ ಒಳಗಾಗುತ್ತಾಳೆ.

ವರದಕ್ಷಿಣೆಯ ತಾಪದಿಂದಾಗಿ ನಲುಗಿ ಹೋಗಬಹುದು. ವರದಕ್ಷಿಣೆಯ ಭಾರಿ ಹೊರೆಯನ್ನು ಹೊರಬೇಕಾದ ಕನ್ಯೆಯ ತಂದೆ ತಾಯಿ ಅವಳ ವಿದ್ಯಾಭ್ಯಾಸದ ಬಗ್ಗೆ, ಅದರಲ್ಲಿಯೂ ದುಬಾರಿ ವೆಚ್ಚದ ಶಿಕ್ಷಣ ಹಾಗೂ ಉನ್ನತ ಶಿಕ್ಷಣದ ಬಗ್ಗೆ ಹೆಚ್ಚು ಕಾಳಜಿ ವಹಿಸುವುದಿಲ್ಲ. ವರದಕ್ಷಿಣೆ ಹೊರೆಯನ್ನು ಆದಷ್ಟು ಕಡಿಮೆಗೊಳಿಸಲು ಸೂಕ್ತ ಸಮಯ ಮತ್ತು ಸಂದರ್ಭಗಳಿಗಾಗಿಯೇ ಕಾಯುತ್ತಿರುವ ಹಿರಿಯರು, ಹುಡುಗಿಯ ಶಿಕ್ಷಣವನ್ನು ಮೊಟಕುಗೊಳಿಸಿ ವಿವಾಹವನ್ನು ಜರುಗಿಸುತ್ತಾರೆ. ಇದರಿಂದ ಹೀಗೆ ಪರಿಸ್ಥಿತಿಯ ಒತ್ತಡದಿಂದಾಗಿ ಭವಿಷ್ಯವನ್ನು ರೂಪಿಸಿಕೊಳ್ಳಬೇಕಾದ ಒಬ್ಬ ಹೆಣ್ಣಿನ ವ್ಯಕ್ತಿತ್ವದ ಪೂರ್ಣ ವಿಕಸನಕ್ಕೆ ಧಕ್ಕೆ ಉಂಟಾಗುತ್ತದೆ.

**ಉಲ್ಲೇಖಗಳು:-**

೧. ಚಂದ್ರು ಕಾಳೇನಹಳ್ಳಿ:೧೯೯೩;ಸೋಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೨. ಗೀತಾನಾಗಭೂಷಣ:೧೯೯೩;ದುರಗಮುರಗಿಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩. ಭಟ್ಟ ಜಿ. ಎಸ್:೧೯೯೩;ಹಸಲರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೪. ಈಶ್ವರ ಎನ್. ಜೋಶಿ:೧೯೮೩; ದಕ್ಷಿಣ ಕನ್ನಡ ಕುಡುಬಿಯರು, ಐ. ಬಿ. ಎಚ್ ಪ್ರಕಾಶನ, ಬೆಂಗಳೂರು.

೫. ಭೈರಪ್ಪ ಕೆ:೧೯೯೬-೧೯೯೭; ಭಾರತೀಯ ಸಮಾಜ, ಕೇಂಬ್ರಿಡ್ಜ್ ಪಬ್ಲಿಷಿಂಗ್ ಕಂಪನಿ, ಬೆಂಗಳೂರು.

೬. ಪ್ರಜಾವಾಣಿ:೦೨-೦೨-೨೦೦೭.

೭. Towards Equality: 1974; Report of National Committee on the status of women in India, Govt of India.

೮. ಉದಯವಾಣಿ:ನವೆಂಬರ್;೨೦೦೭.

೯. ಗಾಯತ್ರಿನಾವಡ:೨೦೦೩;ಮಹಿಳಾ ಸಂಕಥನ, ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು.

೧೦. ಮುಳಗುಂದ ಹೆಚ್.ವಿ, ನಾಗೇಶ ಹೆಚ್.ವಿ:೧೯೮೬;ಆಧುನಿಕ ಮಹಿಳೆ ಮತ್ತು ಸಮಾಜ, ಮಾತೋಶ್ರೀ ಪ್ರಕಾಶನ, ಮುದ್ದೇಬಿಹಾಳ.

ವರದಕ್ಷಿಣೆಯ ಕಾರಣಕ್ಕಾಗಿ ಮಹಿಳೆಯರಿಗೆ ನೀಡುವಂತ ದೈಹಿಕ/ಮಾನಸಿಕ ಕಿರುಕುಳ, ಹಿಂಸೆಗಳನ್ನು ತಡೆಗಟ್ಟಲು ಭಾರತದಲ್ಲಿ ಅನೇಕ ಕಾಯಿದೆ ಕಾನೂನುಗಳು ರಚನೆಗೊಂಡವು. ನಂತರ ಈ ಕಾಯಿದೆಗಳು ಮೂರು ಬಾರಿ ಮರುತಿದ್ದುಪಡಿಗೊಂಡಿವೆ. ಆದರೆ ಕಾಯಿದೆ ಸಮಾಜದಲ್ಲಿನ ವರದಕ್ಷಿಣೆ ಸಮಸ್ಯೆಯನ್ನು ತಡೆಗಟ್ಟಲು ವಿಫಲವಾಗಿವೆ.

ಪ್ರಸ್ತುತ ವರದಕ್ಷಿಣೆ ನಿಷೇಧ ಕಾಯಿದೆ ಪ್ರಕಾರ ವರದಕ್ಷಿಣೆ ಕೊಡುವವರು ಮತ್ತು ತೆಗೆದುಕೊಳ್ಳುವವರು ಇಬ್ಬರು ಅಪರಾಧಿಗಳೆಂದು ಪರಿಗಣಿಸಿದ್ದರೂ, ಸಮಾಜದಲ್ಲಿ ಈ ವರದಕ್ಷಿಣೆ ಶೋಷಣೆಯು ನಿರಂತರವಾಗಿ ಮುಂದುವರೆಯುತ್ತಿರುವುದು ಕಳವಳಕಾರಿಯಾದ ಸಂಗತಿಯಾಗಿದೆ. ವರದಕ್ಷಿಣೆ ಇಡೀ ದೇಶದಲ್ಲಿ ಅದರಲ್ಲಿ ಜಮ್ಮು-ಕಾಶ್ಮೀರ ರಾಜ್ಯವನ್ನು ಬಿಟ್ಟು ಉಳಿದ ಭಾರತದ ರಾಜ್ಯಗಳಿಗೆ ಅನ್ವಯಿಸುವಂತೆ ಪ್ರಪ್ರಥಮವಾಗಿ ವರದಕ್ಷಿಣೆ ನಿಷೇಧ ಕಾಯಿದೆ ೧೯೬೧ರಲ್ಲಿ ಜಾರಿಗೊಂಡಿತು.

'Committee on the status of women' ತನ್ನ ವರದಿಯನ್ನು ಸರಕಾರಕ್ಕೆ ಒಪ್ಪಿಸಿತು. ಇದನ್ನು ಪರಿಗಣಿಸಿದ ಪಾರ್ಲಿಮೆಂಟ್ ದೇಶದ "ವರದಕ್ಷಿಣೆ ಸಮಸ್ಯೆಯ ಹೋಗಲಾಡಿಸಲು ಲೋಕಸಭೆಯ ಸದಸ್ಯರು ಒಮ್ಮತದಿಂದ ೨೦-೨೫-೧೯೬೧ ವರದಕ್ಷಿಣೆ ನಿಷೇಧ ಕಾಯಿದೆಗೆ ಅನುಮೋದನೆ ಕೊಟ್ಟರು. ಇದರ ಫಲವಾಗಿ ಈ ಕಾಯಿದೆಯು ರಾಷ್ಟ್ರದಲ್ಲಿ ೦೧-೦೭-೧೯೬೧ರಲ್ಲಿ ದೇಶದಲ್ಲಿ ಪ್ರಪ್ರಥಮವಾಗಿ ಜಾರಿಗೆ ಬಂದಿತು. ಈ ವರದಕ್ಷಿಣೆ ಅಧಿನಿಯಮ ೧೦ ಸೆಕ್ಷನ್‌ಗಳನ್ನು ಒಳಗೊಂಡ ಚಿಕ್ಕ ಶಾಸನವಾಗಿದೆ. ಆದರೂ ವರದಕ್ಷಿಣೆ ಪ್ರಕರಣಗಳು ದೇಶದಲ್ಲಿ ಅಧಿಕಗೊಂಡವು ನಂತರ ವರದಕ್ಷಿಣೆ ಪ್ರಕರಣಗಳನ್ನು ಆಧರಿಸಿದ ಸಂಸತ್ತು ಮಹಿಳೆಯರ ಮೇಲಿನ ದೌರ್ಜನ್ಯವನ್ನು ತಡೆಗಟ್ಟುವ ದೃಷ್ಟಿಯಿಂದ ಕಾನೂನುಗಳನ್ನು ಬಿಗಿಗೊಳಿಸುವುದಕ್ಕಾಗಿ ೧೯೮೪, ೧೯೮೫ ಮತ್ತು ೧೯೮೬ರಲ್ಲಿ ಕಾನೂನುಗಳನ್ನು ಮರು ತಿದ್ದುಪಡಿಗೆ ಒಳಪಡಿಸಲಾಯಿತು" (ರಾಜಶೇಖರ. ಎಸ್:೨೦೦೧;ಪು. ೧೪೨). ಅದರಂತೆ ವರದಕ್ಷಿಣೆ ನಿಷೇಧ ಅಧಿನಿಯಮವು ೧೯೬೧ರ ೯ನೇ ಸೆಕ್ಷನ್‌ನಲ್ಲಿ ಪ್ರದತ್ತವಾದ ಹಕ್ಕುಗಳನ್ನು ಚಲಾವಣೆಗೆ ತರಲು ಕೇಂದ್ರ ಸರಕಾರವು ನಿಯಮಗಳನ್ನು ರಚಿಸಿತು.

**ವರದಕ್ಷಿಣೆ ನಿಷೇಧ ಕಾನೂನು ೧೯೬೧ರ ಮುಖ್ಯಾಂಶಗಳು**

- "ಮದುವೆ ಮಾಡಿಕೊಂಡರೆ ಆಸ್ತಿ ಅಥವಾ ಹಣ ಕೊಡುವುದಾಗಿ ಹೇಳಿಕೊಳ್ಳುವುದು ಪ್ರಚಾರ ಮಾಡುವುದು ಅಪರಾಧ.
- ವರದಕ್ಷಿಣೆ ಕೊಡುವುದು ಮತ್ತು ಪಡೆಯುವುದು ಶಿಕ್ಷಾರ್ಹ ಅಪರಾಧ.
- ವಿವಾಹಕ್ಕಾಗಿ ಯಾವುದೇ ರೀತಿಯಲ್ಲಿ ಆಸ್ತಿ ಕೇಳುವುದು ಶಿಕ್ಷಾರ್ಹ ಅಪರಾಧ.
- ಮದುವೆಗೆ ಸಂಬಂಧಿಸಿದಂತೆ ವಿವಾಹದ ಮೊದಲು ಅಥವಾ ಆಮೇಲೆ ಕೊಡುವ ಒಪ್ಪಂದವು ಅಪರಾಧವಾಗಿದೆ, ಅದು ವರದಕ್ಷಿಣೆಯಾಗುತ್ತದೆ.
- ಗಂಡು ಹೆಣ್ಣಿನ ಕಡೆಯವರಿಬ್ಬರು ತಮಗೆ ಬರುವ ಉಡುಗೊರೆಗಳ ಪಟ್ಟಿ ಸಿದ್ಧ ಮಾಡಿದರೆ ಮಾತ್ರ ಆ ಉಡುಗೊರೆಗಳನ್ನು ವರದಕ್ಷಿಣೆಯೆಂದು ಪರಿಗಣಿಸಲಾಗುವುದಿಲ್ಲ.
- ವರದಕ್ಷಿಣೆ ದೂರನ್ನು ಮದುವೆಯಾಗುವ ವಧು ಅವಳ ತಂದೆ ತಾಯಿ ಅಥವಾ ಯಾವುದೇ ಮಾನ್ಯತೆ ಪಡೆದಿರುವ ಸೇವಾ ಸಂಘಟನೆ ನೀಡಬಹುದಾಗಿದೆ. ನ್ಯಾಯಾಲಯವು ಸ್ವ-ಇಚ್ಛೆಯಿಂದ ಪ್ರಕರಣವನ್ನು ದಾಖಲಿಸಿಕೊಳ್ಳಬಹುದು.
- ಮದುವೆಯಾದ ಸಂದರ್ಭದಲ್ಲಿ ಹುಡುಗಿ ಪಡೆಯುವ ಆಸ್ತಿ ಸ್ತ್ರೀಧನ ಅದು ಅವಳಿಗೆ ಸೇರಿದ್ದಾಗಿದ್ದೂ ಯಾರೇ ಕೊಟ್ಟಿದರೂ ತನ್ನಲ್ಲೇ ಉಳಿಸಿಕೊಂಡು ಹೋಗಬಹುದು.
- ವರದಕ್ಷಿಣೆ ಶಾಸನನ್ವಯ ಅಪರಾಧಿಗಳಿಗೆ ಜಾಮೀನು ನೀಡಲಾಗುವುದಿಲ್ಲ.
- ವರದಕ್ಷಿಣೆ ಆರೋಪಕ್ಕೆ ಒಳಗಾದವನು ತಾನು ಅಪರಾಧಿಯಲ್ಲ ಎಂದು ಸಾಬೀತುಪಡಿಸಲು ಸಾಕ್ಷಿ ತೋರಿಸಬೇಕಾಗುತ್ತದೆ" (Gender and Law:2005;P.36).

**ವರದಕ್ಷಿಣೆ ಅಪರಾಧಗಳಿಗೆ ಭಾರತೀಯ ದಂಡ ಸಂಹಿತೆಯ ಶಿಕ್ಷೆಗಳು**

ಭಾರತೀಯ ದಂಡ ಸಂಹಿತೆಯ ಕಲಂ-೩ರ ಪ್ರಕಾರ ಹೇಳುವಂತೆ "ಈ ಶಾಸನವು ಜಾರಿಗೆ ಬಂದ ತಾರೀಖಿನಿಂದ ಯಾವುದೇ ವ್ಯಕ್ತಿಯು ವರದಕ್ಷಿಣೆಯನ್ನು ಕೊಡುವುದಕ್ಕೆ, ಪಡೆದುಕೊಳ್ಳುವುದಕ್ಕೆ ಪ್ರಚೋದನೆ ನೀಡುವುದು ಅಪರಾಧವಾಗಿದ್ದು, ಅವನಿಗೆ ಕನಿಷ್ಠ ೫ ವರ್ಷಗಳಿಗೆ ಕಡಿಮೆಯಿಲ್ಲದೆ ಜೈಲುಗೃಹವಾಸ ಹಾಗೂ ಕನಿಷ್ಠ ೧೫ ಸಾವಿರ ರೂಪಾಯಿ, ಅದಕ್ಕಿಂತ ವರದಕ್ಷಿಣೆಯ ಮೊತ್ತದಷ್ಟು ದಂಡವನ್ನು ವಿಧಿಸಲಾಗುತ್ತದೆ" (ಸಂ.ನಾಗರಾಜ ಅರಳಿ:೨೦೦೨;ಪು.೮೭).

ಭಾರತೀಯ ದಂಡ ಸಂಹಿತೆ ಕಲಂ-೪ರ ಪ್ರಕಾರ "ವ್ಯಕ್ತಿಯು ವರದಕ್ಷಿಣೆಯನ್ನು ನೇರವಾಗಿ ಅಥವಾ ಪರೋಕ್ಷವಾಗಿ ವಧುವಿನ ತಂದೆ ತಾಯಿಗಳಿಗೆ ಬೇಡಿದರೆ ಅಂಥವರಿಗೆ ೬ ತಿಂಗಳವರೆಗೆ ಮತ್ತು ಎರಡು ವರ್ಷಗಳವರೆಗೆ ವಿಸ್ತರಿಸಬಹುದಾದ ಜೈಲುವಾಸ ಮತ್ತು ಗರಿಷ್ಠ ೧೦ ಸಾವಿರ ರೂಪಾಯಿವರೆಗಿನ ದಂಡ ವಿಧಿಸಲಾಗುತ್ತದೆ" (ಗೀತಾಕೃಷ್ಣಮೂರ್ತಿ:೨೦೦೭;ಪು. ೧೨೫-೧೨೬).

ಭಾರತೀಯ ದಂಡ ಸಂಹಿತೆ ಕಲಂ-೪ಎ ರ ಪ್ರಕಾರ "ಯಾವುದೇ ವಧುವಿನ ತಂದೆಯು ತನ್ನ ಮಗಳ ಬಗ್ಗೆ ವೃತ್ತ ಪತ್ರಿಕೆ ಜಾಹೀರಾತಿನ ಮೂಲಕ ಮಗಳನ್ನು ಮದುವೆಯಾದವರಿಗೆ ತನ್ನ ಆಸ್ತಿಯಲ್ಲಿ, ವ್ಯಾಪಾರದಲ್ಲಿ ಪಾಲುಕೊಡುವುದಾಗಿ ಪ್ರಚಾರ ಮಾಡಿದರೆ ಅಂತಹವರಿಗೆ ೬ ತಿಂಗಳು ಕಡಿಮೆಯಿಲ್ಲದೆ ೫ ವರ್ಷದವರೆಗೆ ಶಿಕ್ಷೆ ಮತ್ತು ೭೫ ಸಾವಿರ ರೂಪಾಯಿ ದಂಡ ಶಿಕ್ಷೆಯೂ ನೀಡಲಾಗುತ್ತದೆ" (ಸಂ. ನಾಗರಾಜ ಅರಳಿ:೨೦೦೨;ಪು. ೮೭).

ಭಾರತೀಯ ದಂಡ ಸಂಹಿತೆಯ ಕಲಂ-೮ಎ ರ ಪ್ರಕಾರ "ಯಾವೊಬ್ಬ ವ್ಯಕ್ತಿಯಾಗಲಿ ವರದಕ್ಷಿಣೆ ಸಲುವಾಗಿ ಅಪರಾಧ ಮಾಡಿದ್ದರೆ, ವಿಚಾರಣೆ ಗುರಿಪಡಿಸಿದಾಗ ಅಪರಾಧಿಯು ರುಜುವಾತುಪಡಿಸುವ ಜವಾಬ್ದಾರಿ ದೂರು ದಾಖಲಿಸಿದ ವ್ಯಕ್ತಿಯದಾಗಿರುತ್ತದೆ ಎಂದು ಈ ಕಲಂ ಹೇಳುತ್ತದೆ" (ಸಂ. ನಾಗರಾಜ ಅರಳಿ:೨೦೦೨;ಪು.೮೯).

ಇಷ್ಟೆಲ್ಲ ವರದಕ್ಷಿಣೆ ನಿಷೇಧ ಕಾನೂನು ಇದ್ದರೂ ದಿನೇ ದಿನೇ ವರದಕ್ಷಿಣೆ ಪ್ರಕರಣಗಳು ಹೆಚ್ಚಾಗುತ್ತಿದ್ದು, ಇದನ್ನು ಗಮನಿಸಿದ ಕೇಂದ್ರ ಸರಕಾರವು ೧೯೮೬ರ ವರದಕ್ಷಿಣೆಯ ೪೩ನೇ ಕಾಯಿದೆಗೆ ತಿದ್ದುಪಡಿ ಮಾಡಿಸಿ ಭಾರತ ದಂಡ ಸಂಹಿತೆ ಕಲಂ ೩೦೪ಬಿ ಎಂಬ ಹೊಸ ಕಲಂನ್ನು ಸೇರಿಸಿ ಅದಕ್ಕೆ ಪೂರಕವಾಗಿ ಅದೇ ತಿದ್ದುಪಡಿಯ ಮೂಲಕ ಭಾರತ ಸಾಕ್ಷ್ಯ ಅಧಿನಿಯಮಕ್ಕೆ ೧೧೩ ಬಿ ಎಂಬ ಹೊಸ ಕಲಂನ್ನು ಸೇರಿಸಿತು.

ಸೆಕ್ಷನ್ ೩೦೪ ಬಿ (ಐ.ಪಿ.ಸಿ) ಪ್ರಕರಣಗಳಲ್ಲಿ ಪರಿಭಾವಿಸಿದಂತೆ ವರದಕ್ಷಿಣೆ ಸಾವಿನ ಅಪರಾಧ ಎಂದರೆ "ಮಹಿಳೆಯ ಸಾವು ಮದುವೆಯಾದ ೭ ವರ್ಷಗಳೊಳಗೆ ಸುಟ್ಟಗಾಯ ಅಥವಾ ದೈಹಿಕಮಟ್ಟದ ಗಾಯಗಳಿಂದ ಅಥವಾ ಸಹಜ ಸಂದರ್ಭಗಳು ಅಲ್ಲದೆ ಅನ್ಯಥಾ ಉಂಟಾದರೆ ಮತ್ತು ಅವಳ ಸಾವಿನ ನಿಕಟ ಪೂರ್ವದಲ್ಲಿ ವರದಕ್ಷಿಣೆಗಾಗಿ ಅಥವಾ ವರದಕ್ಷಿಣೆ ಸಂಬಂಧದಲ್ಲಿ ಅವಳ ಪತಿಯಿಂದ ಅಥವಾ ಅವಳ ಪತಿಯ ಸಂಬಂಧಿಯಿಂದ ಅವಳು ಹಿಂಸೆಗೆ ಅಥವಾ ಕಿರುಕುಳಕ್ಕೆ ಗುರಿಯಾಗಿದ್ದಳು ಎಂಬುದನ್ನು ರುಜುವಾತುಪಡಿಸಿದರೆ ಅಂಥ ಸಾವನ್ನು

ವರದಕ್ಷಿಣೆ ಸಾವು ಎಂದು ಕರೆಯತಕ್ಕದ್ದು ಮತ್ತು ಅಂತಹ ಪತಿ ಅಥವಾ ಸಂಬಂಧಿ ಈಕೆಯ ಸಾವಿಗೆ ಕಾರಣ ಎಂಬುದಾಗಿ ಭಾವಿಸಲಾಗುತ್ತದೆ. ವರದಕ್ಷಿಣೆ ಸಾವನ್ನುಂಟುಮಾಡಿದ ಯಾವುದೇ ವ್ಯಕ್ತಿಗೆ ೭ ವರ್ಷಗಳಿಗೆ ಕಡಿಮೆಯಿಲ್ಲದೆ ಜೀವಾವಧಿ ಕಾರಾಗೃಹವಾಸ ಶಿಕ್ಷೆಯನ್ನು ವಿಧಿಸತಕ್ಕದ್ದು ಎಂದು ಉಪಬಂಧಿಸಲಾಗಿದೆ" (ಗೀತಾಕೃಷ್ಣಮೂರ್ತಿ:೨೦೦೭;ಪು.೧೩೦).

ಕಲಂ ೧೧೩ ಬಿ ಈ ಕಲಂ ೩೦೪ ಬಿ ಸೆಕ್ಷನ್‌ಗೆ ಪೂರಕವಾಗಿ ಯಾವೊಬ್ಬ ವ್ಯಕ್ತಿಯು ತನ್ನ ಹೆಂಡತಿಯನ್ನು ವರದಕ್ಷಿಣೆಗೋಸ್ಕರ ದೈಹಿಕ/ಮಾನಸಿಕವಾಗಿ ಹಿಂಸಿಸಿದಾಗ ಆಕೆ ಸಾವನಪ್ಪಿದರೆ ಗಂಡ ಆಕೆಯ ಸಾವಿಗೆ ಕಾರಣನಾಗಿದ್ದನೆಂಬುದಾಗಿ ನ್ಯಾಯಾಲಯ ಭಾವಿಸತಕ್ಕದೆಂದು ಭಾರತೀಯ ಸಾಕ್ಷ್ಯ ಅಧಿನಿಯಮ ಹೇಳುತ್ತದೆ.

"೧೯೮೩ರ ೪೬ನೇ ಕಾಯಿದೆಯ ತಿದ್ದುಪಡಿಯ ಭಾರತ ದಂಡ ಸಂಹಿತೆಗೆ ೪೯೮ ಎ ಕಲಂನ್ನು ಸೇರ್ಪಡೆ ಮಾಡಿತು. ಇದರ ಶಾಸನದ ಪೂರಕವಾಗಿ ಭಾರತ ಸಾಕ್ಷ್ಯ ಅಧಿನಿಯಮಕ್ಕೆ ತಿದ್ದುಪಡಿ ತಂದು ೧೧೩ ಎ ಎಂಬ ಕಲಂ ಸೇರಿಸಿತು. ೨೫-೧೨-೧೯೮೩ರಂದು ಜಾರಿಗೆ ಬಂದಿದೆ" (ಗೌತಮ್ ಎಸ್.ಆರ್:೨೦೦೨;ಪು.೫೯).

೪೯೮ ಎ ಕಲಂನ ಪ್ರಕಾರ "ಮಹಿಳೆಯ ಪತಿ ಅಥವಾ ಪತಿಯ ಸಂಬಂಧಿ ಅವಳನ್ನು ಹಿಂಸೆಗೆ ಗುರಿಪಡಿಸುವುದು ಮಹಿಳೆಯ ಪತಿ ಅಥವಾ ಪತಿಯ ಸಂಬಂಧಿಯಾಗಿರುವ ಯಾವನೇ ವ್ಯಕ್ತಿ ಅಂಥ ಮಹಿಳೆಯನ್ನು ಹಿಂಸೆಗೆ ಗುರಿಪಡಿಸಿದರೆ ಅವನು ೩ ವರ್ಷಗಳವರೆಗೆ ವಿಸ್ತರಿಸಬಹುದಾದ ಕಾರವಾಸ ದಂಡ ಅನುಭವಿಸಿ ಮತ್ತು ಜುಲ್ಮಾನೆಯನ್ನು (ದಂಡ) ಭರಿಸಬೇಕಾಗುತ್ತದೆ" (ಗೀತಾಕೃಷ್ಣಮೂರ್ತಿ:೨೦೦೭; ಪು.೧೩೧). ಅದರಂತೆ ಹೆಂಗಸಿನ ಮನೆಯಲ್ಲಿ ಪತಿ ಅಥವಾ ಇತರ ಸದಸ್ಯರು ಹಿಂಸೆ, ಕಿರುಕುಳ ದೌರ್ಜನ್ಯ ಅನುಚಿತ ನಡವಳಿಕೆ ನೀಡಿದಲ್ಲಿ ಈ ಮೇಲಿನ ಕಲಂ ಅನ್ವಯವಾಗುತ್ತದೆ. ಅಪರಾಧಿಗಳನ್ನು ಪೋಲಿಸ್ ವಾರಂಟ್ ಇಲ್ಲದೆ ಬಂಧಿಸಬಹುದು. ಪೋಲಿಸರೇ ಸ್ವತಃ ಜಾಮೀನು ನೀಡುವಂತಿಲ್ಲ. ಆದರೆ ನ್ಯಾಯಾಲಯದಿಂದ ಜಾಮೀನು ತೆಗೆದುಕೊಳ್ಳಬಹುದಾಗಿದೆ. ಇದಕ್ಕೆ ಪೂರಕವಾದ ಸಾಕ್ಷ್ಯ ಅಧಿನಿಯಮ ಹೇಳುವ ಪ್ರಕಾರ, ೧೧೩ ಎ ಸಾಕ್ಷ್ಯ ಅಧಿನಿಯಮಕ್ಕೆ "ವಿವಾಹವಾಗಿ ೭ ವರ್ಷಗಳ ಒಳಗೆ ಸ್ತ್ರೀಯೊಬ್ಬಳು ಆತ್ಮಹತ್ಯೆ ಮಾಡಿಕೊಂಡಿದ್ದರೆ ಇದಕ್ಕೆ ಗಂಡ/ಅವರ ಮನೆಯವರಿಂದ ದೈಹಿಕ ಹಿಂಸೆ ನೀಡಿ ಸಾಯಿಸಿದ್ದರೆ ಅಂದರೆ ಸುಟ್ಟ ಗಾಯ ಇತ್ಯಾದಿ, ಗಂಡ ಆತನ ಮನೆಯವರು ಅವಳ ಆತ್ಮಹತ್ಯೆಗೆ ಪ್ರಚೋದಿಸಿದರೆಂದು ನ್ಯಾಯಾಲಯ ಭಾವಿಸಿಕೊಳ್ಳುತ್ತದೆ" (ಗೌತಮ್.ಎಸ್.ಆರ್: ೨೦೦೨; ಪು.೬೨-೬೩). ಈ ಸಾಕ್ಷ್ಯ ಅಧಿನಿಯಮದಲ್ಲಿ ಹೇಳುತ್ತದೆ.

ಮೇಲೆ ಹೇಳಿದ ಭಾರತ ದಂಡ ಸಂಹಿತೆಯ ೪೯೮ ಎ ದಲ್ಲಿ ಅಪರಾಧವೆನಿಸುವ ಒಂದು ಕೃತ್ಯದ ಬಗ್ಗೆ ಯಾರು ದೂರು ಸಲ್ಲಿಸಬಹುದು ಎಂಬುದನ್ನು ೧೯೮ ಎ ಪ್ರಕರಣವನ್ನು ಸೇರಿಸಿ ಅದರಲ್ಲಿ ಸ್ಪಷ್ಟಪಡಿಸಲಾಗಿದೆ. ಅದು ಈ ಕೆಳಗಿನಂತಿವೆ. ಈ ಕಾಯಿದೆ ಪ್ರಕಾರ ವರದಕ್ಷಿಣೆ ಅಪರಾಧ ಪ್ರಕರಣ ಕುರಿತು ಈ ಕೆಳಗಿನವರ ದೂರನ್ನು ಪೋಲೀಸ್ ಠಾಣೆಗೆ ದಾಖಲಿಸಬಹುದು.

- "ಕ್ರೌರ್ಯಕ್ಕೆ ಒಳಗಾದ ವ್ಯಕ್ತಿ ಅಥವಾ ಅವಳ ತಂದೆ, ತಾಯಿ ಸಹೋದರ, ಸಹೋದರಿ ಅಥವಾ ತಂದೆ ಅಥವಾ ತಾಯಿಯ ಸಹೋದರ, ಸಹೋದರಿ ಬಂದು ದೂರನ್ನು ಸಲ್ಲಿಸಬಹುದು.
- ನ್ಯಾಯಾಲಯದ ಅನುಮತಿ ಪಡೆದು ಅವಳ ರಕ್ತ ಸಂಬಂಧಿ ವೈವಾಹಿಕ ಅಥವಾ ದತ್ತಕ ಸಂಬಂಧಿಯಾದ ಯಾರಾದರೂ ದೂರನ್ನು ಸಲ್ಲಿಸಬಹುದು" (ಗೀತಾಕೃಷ್ಣಮೂರ್ತಿ: ೨೦೦೭; ಪು.೧೩೧-೧೩೨). ಈ ಮೇಲಿನ ಕಲಂನ ಎಲ್ಲಾ ಉಪಬಂಧಗಳು ಮಹಿಳೆಯೊಬ್ಬಳಿಗೆ ಅಥವಾ ಆಕೆಯ ಸಂಬಂಧಿಗಳಿಗೆ ಗಂಡನು ನೀಡಿದ ಹಿಂಸೆಯ ವಿರುದ್ಧ ದೂರನ್ನು ಸಲ್ಲಿಸಲು ಅನುಮತಿ ಹೊಂದಿರುತ್ತದೆ.

ನವ ವಿವಾಹಿತ ಮಹಿಳೆ ಸಂಶಯಾಸ್ಪದ ಸಾವನ್ನಪ್ಪಿದ್ದರೆ ಅಥವಾ ಈ ಸಾವು ಪ್ರಕರಣಗಳಾಗಿ ನಡೆಯುತ್ತಿದ್ದರೆ ಅದರಲ್ಲಿ ಗಂಡನ ಮನೆಯವರು ಅಂದರೆ ಗಂಡನ ಕುಟುಂಬ ಸದಸ್ಯರು ಮಹಿಳೆಯ ದೇಹವನ್ನು ಸಂಸ್ಕಾರಗೊಳಿಸುತ್ತಾರೆ. ಇಂತಹ ಸಂಸ್ಕಾರ ಕ್ರಮವನ್ನು ತಡೆಯುವುದಕ್ಕಾಗಿ ಕ್ರಿಮಿನಲ್ ಪ್ರಕ್ರಿಯೆ ಸಂಹಿತೆಯ "೧೭೪ನೇ ಪ್ರಕರಣವನ್ನು ತಿದ್ದುಪಡಿ ಮಾಡಲಾಗಿದೆ ಮತ್ತು ಈ ತಿದ್ದುಪಡಿ ಮಾಡುವ ಮೂಲಕ ಮೃತದೇಹವನ್ನು ಕಡ್ಡಾಯವಾಗಿ ವೈದ್ಯಕೀಯ ಪರೀಕ್ಷೆಗೆ ಕಳುಹಿಸಬೇಕೆಂದು ನಿರ್ಬಂಧ ವಿಧಿಸಲಾಗಿದೆ.

೧. ಮಹಿಳೆ ವಿವಾಹದ ತರುವಾಯದ ೭ ವರ್ಷಗಳೊಳಗೆ ಆತ್ಮಹತ್ಯೆ ಮಾಡಿಕೊಂಡಿದ್ದರೆ,
೨. ವಿವಾಹವಾದ ೭ ವರ್ಷಗಳೊಳಗೆ ಸಾವು ಸಂಭವಿಸಿದರೆ ಆ ಮಹಿಳೆಯ ಸಾವು ಇತರ ವ್ಯಕ್ತಿಯ ಅಪರಾಧದಿಂದ ಆಗಿದೆ ಎಂದು ಸಕಾರಣವಾಗಿ ಸಂದೇಹಿಸಬಹುದಾದ ಸಂದರ್ಭಗಳಲ್ಲಿ ಆಗಿದ್ದರೆ,
೩. ಮಹಿಳೆಯ ಸಾವು ವಿವಾಹದ ೭ ವರ್ಷಗಳೊಳಗೆ ಆಗಿದ್ದರೆ ಆ ಬಗ್ಗೆ ಮಹಿಳೆಯು ಯಾರೇ ಬಂದು ಕೋರಿಕೆ ಸಲ್ಲಿಸಿದರೆ,
೪. ಸಾವಿನ ಕಾರಣದ ಬಗ್ಗೆ ಸಂದೇಹವಿದ್ದರೆ ಅಥವಾ,

೫. ಪೋಲೀಸು ಅಧಿಕಾರಿ ಅಥವಾ ಇತರ ಯಾವೊಬ್ಬ ವ್ಯಕ್ತಿ ಹಾಗೆ ಮಾಡುವುದು ಉಚಿತವೆಂದು ಭಾವಿಸಿದರೆ. ಅಂಥ ಸಂದರ್ಭಗಳಲ್ಲಿ ವೈದ್ಯಕೀಯ ಪರೀಕ್ಷೆಗೆ ಕಳುಹಿಸಬೇಕಾಗುತ್ತದೆ" (ಗೀತಾಕೃಷ್ಣಮೂರ್ತಿ:೨೦೦೭;ಪು.೧೩೨-೧೩೩) ಎಂದು ಹೇಳುತ್ತದೆ.

ಮಹಿಳೆಯ ವಿವಾಹದ ೭ ವರ್ಷಗಳೊಳಗೆ ಆತ್ಮಹತ್ಯೆ ಮಾಡಿಕೊಂಡಿದ್ದರೆ ಅಥವಾ ಸಂಶಯಾಸ್ಪದ ರೀತಿಯಲ್ಲಿ ಸತ್ತರೆ ಸ್ವತಃ ಮ್ಯಾಜಿಸ್ಟ್ರೇಟರ ತನಿಖೆಯನ್ನು ನಡೆಸುವುದರ ಕುರಿತು ೧೭೬ನೇ ಉಪಬಂಧದಲ್ಲಿ ಕಲ್ಪಿಸುವ ಕ್ರಿಮಿನಲ್ ಪ್ರಕ್ರಿಯಾ ಸಂಹಿತೆಯ ಪ್ರಕರಣವನ್ನು ೧೯೮೩ರಲ್ಲಿ ತಿದ್ದುಪಡಿ ಮಾಡಲಾಯಿತು. ಇದರ ಪ್ರಕಾರ "ಮಹಿಳೆ ತನ್ನ ವಿವಾಹವಾದ ತರುವಾಯದ ೭ ವರ್ಷಗಳೊಳಗೆ ಆತ್ಮಹತ್ಯೆ ಮಾಡಿಕೊಂಡಿದ್ದರೆ ಅಥವಾ ಆ ಅವಧಿಯೊಳಗೆ ಅನುಮಾನಾಸ್ಪದ ರೀತಿಯಲ್ಲಿ ಸಾವಿಗೀಡಾಗಿದ್ದರೆ ಪೋಲೀಸ್ ವಿಚಾರಣೆಯೊಂದಿಗೆ ಮ್ಯಾಜಿಸ್ಟ್ರೇಟರೂ ವಿಚಾರಣೆ ನಡೆಸಬಹುದು. ದೇಹವನ್ನು ಸಂಸ್ಕಾರ (ಹೂಳು) ಮಾಡಿದ್ದರೆ ಅದನ್ನು ಹೊರ ತೆಗೆಯುವಂತೆ ಆದೇಶಿಸಬಹುದು ಮತ್ತು ಮೃತ ಮಹಿಳೆಯ ಸಂಬಂಧಿಗಳಿಗೆ (ತಂದೆ ತಾಯಿ, ಮಕ್ಕಳು, ಸಹೋದರ, ಸಹೋದರಿಯರು ಮತ್ತು ಪತಿ) ವಿಚಾರಣೆಯ ಕಾಲದಲ್ಲಿ ಹಾಜರಾಗುವಂತೆ ಆದೇಶಿಸಬಹುದು. ಒಟ್ಟಿನಲ್ಲಿ ಭಾರತೀಯ ಸಾಕ್ಷ್ಯ ಅಧಿನಿಯಮವನ್ನು ಮಹಿಳೆಯರಿಗೆ ನ್ಯಾಯ ದೊರಕಲು ಅನುಕೂಲವಾಗುವ ರೀತಿಯಲ್ಲಿ ತಿದ್ದುಪಡಿ ಮಾಡಲಾಗಿದೆ. ಏಕೆಂದರೆ ಅನೇಕ ಪ್ರಕರಣಗಳಲ್ಲಿ ಆತ್ಮಹತ್ಯೆಗೆ ಪ್ರೇರಣೆ ನೀಡುವುದು ಅಪರಾಧ, ಹಾಗಾಗಿ ಮಹಿಳೆಯ ಆತ್ಮಹತ್ಯೆಗೆ ಕಾರಣವಾದ ಸಾಕ್ಷಿಗಳನ್ನು ಮುಚ್ಚಿ ಹಾಕಲು ಅಪರಾಧಿಗಳು ಪ್ರಯತ್ನಿಸುತ್ತಾರೆ. ಇದರಿಂದಾಗಿ ಆರೋಪಿತರ ಅಪರಾಧಗಳನ್ನು ರುಜುವಾತುಪಡಿಸಲು ಪ್ರಾಸಿಕ್ಯೂಷನ್ ವಕೀಲರಿಗೆ ಸಾಕಷ್ಟು ಸಾಕ್ಷ್ಯಗಳು ದೊರೆಯುತ್ತಿರಲಿಲ್ಲ. ಸಾಕ್ಷ್ಯಗಳ ಕೊರತೆಯಿಂದಾಗಿ ಅನೇಕ ಪ್ರಕರಣಗಳಲ್ಲಿ ಅಪರಾಧಿಗಳು ದೋಷಮುಕ್ತರಾಗಿ ಬಿಡುತ್ತಿದ್ದರು. ಇದನ್ನು ಪರಿಗಣಿಸಿದ ನ್ಯಾಯಾಲಯ ಈಗ ಈ ತಿದ್ದುಪಡಿಯಿಂದಾಗಿ ತಾನು ನಿರ್ದೋಷಿ ಎಂಬುದನ್ನು ಸಾಬೀತುಪಡಿಸಲು ಆರೋಪಿತ ಅಪರಾಧಿಯೇ ಸಾಕ್ಷ್ಯಾಧಾರಗಳಿಂದ ಸಿದ್ದಗೊಳಿಸಿಕೊಳ್ಳಬೇಕಾಗುತ್ತದೆ. ಮದುವೆಯಾದ ಏಳು ವರ್ಷಗಳೊಳಗೆ ಪತ್ನಿ ಮರಣ ಹೊಂದಿದರೆ ಮತ್ತು ಅವಳ ಹಾಗೂ ಸಂಬಂಧಿಗಳು ಅವಳನ್ನು ಹಿಂಸಿಸುತ್ತಿದ್ದರೆಂಬುದನ್ನು ಸಾಬೀತುಪಡಿಸಿದರೆ ಆರೋಪಿಯನ್ನು ನ್ಯಾಯಾಲಯ ಅಪರಾಧಿಯೆಂದೇ ಭಾವಿಸುತ್ತದೆ" (ಗೀತಾಕೃಷ್ಣಮೂರ್ತಿ:೨೦೦೭;ಪು. ೧೩೩). ಮ್ಯಾಜಿಸ್ಟ್ರೇಟರು ತನಿಖೆಯನ್ನು ನಡೆಸಬಹುದೆಂದು ಈ ಕಲಂನಲ್ಲಿ ಹೇಳಿದೆ.

"ದಂಡ ಸಂಹಿತೆ ೩೦೪ ಬಿ ಮತ್ತು ೧೧೩ ಬಿ ಹಾಗೂ ೪೯೮ ಎ ಮತ್ತು ೧೧೩ ಬಿ ಕಲಂಗಳಿಗೆ ಇರುವ ವ್ಯತ್ಯಾಸ ಕೂಡ ಈ ರೀತಿಯಾಗಿದೆ.

| **ದಂಡಸಂಹಿತೆ ೩೦೪ ಬಿ** | **ದಂಡಸಂಹಿತೆ ೪೯೮ ಎ** |
|---|---|
| ೧. ಸ್ತ್ರೀಯ ಸಾವು ಸಂಭವಿಸಿರಬೇಕು | ೧. ಸ್ತ್ರೀ ಆತ್ಮಹತ್ಯೆ ಮಾಡಿಕೊಂಡಿರಬೇಕು ಅಥವಾ ಅವಳ ಪ್ರಾಣ ಅವಯವ, ಮಾನಸಿಕ/ ದೈಹಿಕ ಆರೋಗ್ಯ ಇವುಗಳಿಗೆ ಗಂಭೀರವಾದ ಕ್ಷತಿ/ ಅಪಾಯ ಉಂಟಾಗಿರಬೇಕು. |
| ೨. ಸಾವು ಮದುವೆಯಾದ ಏಳು ವರ್ಷಗಳ ಒಳಗೆ ಸಂಭವಿಸಿರಬೇಕು. | ೨. ಆತ್ಮಹತ್ಯೆ ಅಥವಾ ಮೇಲೆ ವಿವರಿಸಿದ ಅಪಾಯ/ ಕ್ಷತಿ ಯಾವಾಗಲಾದರೂ ಸಂಭವಿಸಿರಬಹುದು. |
| ೩. ಸಾವಿಗೆ ಮುಂಚೆ ಗಂಡ ಅಥವಾ ಗಂಡನ ಸಂಬಂಧಿ ವರದಕ್ಷಿಣೆ ತರುವಂತೆ ಒತ್ತಾಯ ಮಾಡಿ ಕ್ರೌರ್ಯದಿಂದ ನಡೆಸಿಕೊಂಡಿದ್ದಿರಬೇಕು ಇದು ವರದಕ್ಷಿಣೆ ಸಾವು. | ೩. ಗಂಡನ ಅಥವಾ ಗಂಡನ ಸಂಬಂಧಿಯ ಬುದ್ಧಿಪೂರ್ವಕ ನಡತೆಯಿಂದ ಇದು ಸಂಭವಿಸಿರಬೇಕು ಅಥವಾ ಆಸ್ತಿಯನ್ನು ತರಬೇಕೆಂದು ಅವರು ಕೊಟ್ಟ ಕಿರುಕುಳದಿಂದ ಹೀಗಾಗಿರಬೇಕು. |
| ೪. ಸಾವು ಸುಟ್ಟ ಗಾಯದಿಂದ ಅಥವಾ ದೈಹಿಕ ಗಾಯದಿಂದ ಅಥವಾ ಅಸ್ವಾಭಾವಿಕವಾಗಿ ಆಗಿರಬೇಕು. | ೪. ಮೇಲೆ ವಿವರಿಸಿದ ಕ್ರೌರ್ಯದಿಂದ ಆತ್ಮಹತ್ಯೆ/ಕ್ಷತಿ/ ಅಪಾಯ ಸಂಭವಿಸಿರಬೇಕು. |
| ೫. ಪೂರಕವಾದ ಸಾಕ್ಷ್ಯ ಅಧಿನಿಯಮ ೧೧೩ಬಿ. | ೫. ಪೂರಕವಾದ ಸಾಕ್ಷ್ಯ ಅಧಿನಿಯಮ ೧೧೩ಎ. |
| ೬. ಮೇಲೆ ತಿಳಿಸಿದ ಸಾಕ್ಷ್ಯ ಅಧಿನಿಯಮ ಪ್ರಕಾರ ಸಾವಿಗೆ ಮುಂಚೆ ವರದಕ್ಷಿಣೆಗಾಗಿ ಕಿರುಕುಳ ಕೊಟ್ಟಿದ್ದರೆ, ಆ ವ್ಯಕ್ತಿಯೇ ವರದಕ್ಷಿಣೆ ಸಾವನ್ನುಂಟು ಮಾಡಿದೆ ಎಂದು ನ್ಯಾಯಾಲಯ ಭಾವಿಸಲೇಬೇಕು. **ಟಿಪ್ಪಣಿ:** ದೋಷಿಯೋ, ನಿರ್ದೋಷಿಯೋ ಎಂದು ನ್ಯಾಯಾಲಯದ ವಿವೇಚನೆಗೆ ಬಿಟ್ಟಿಲ್ಲ. ವರದಕ್ಷಿಣೆ ಕಿರುಕುಳ ಕೊಟ್ಟ ಅನತಿ ಸಮಯದಲ್ಲಿ ಸಾವುಂಟಾಗಿದ್ದರೆ ಗಂಡ/ಗಂಡನ ಸಂಬಂಧಿ ಸಾವುಂಟು ಮಾಡಿದರೆಂದು ನ್ಯಾಯಾಲಯ ಭಾವಿಸಲೇಬೇಕು. | ೬. ಹೆಂಡತಿ ವಿವಾಹವಾದ ಏಳು ವರ್ಷಗಳ ಒಳಗೆ ಮೇಲೆ ತಿಳಿಸಿದ ಸಂದರ್ಭದಲ್ಲಿ ಆತ್ಮಹತ್ಯೆ ಮಾಡಿಕೊಂಡಿದ್ದರೆ, ಗಂಡ ಅಥವಾ ಗಂಡನ ಸಂಬಂಧಿ ಆತ್ಮಹತ್ಯೆಗೆ ಪ್ರೇರೇಪಿಸಿದರೆಂದು ನ್ಯಾಯಾಲಯ ಭಾವಿಸಿಕೊಳ್ಳಬಹುದು. **ಟಿಪ್ಪಣಿ:** ಆತ್ಮಹತ್ಯೆ ಯಾವಾಗಲಾದರೂ ಸಂಭವಿಸಿದ್ದಿರಬಹುದು. ಆದರೆ ಏಳು ವರ್ಷಗಳ ಒಳಗೆ ಸಂಭವಿಸಿದ ಸಂದರ್ಭದಲ್ಲಿ ಗಂಡ ಅಥವಾ ಗಂಡನ ಸಂಬಂಧಿ ಪ್ರಚೋದಿಸದರೆಂದು ನ್ಯಾಯಾಲಯ ಭಾವಿಸಿಕೊಳ್ಳಬಹುದು" (ಗೌತಮ್ ಎಸ್.ಆರ್:೨೦೦೨; ಪು. ೬೩-೬೪). |

ಇಷ್ಟೆಲ್ಲಾ ಕಾಯಿದೆಗಳಿದ್ದರೂ ವಿವಾಹಿತ ಬದುಕಿನಲ್ಲಿ ವರದಕ್ಷಿಣೆ ಸಮಸ್ಯೆ ಕಾಡುತ್ತಿದೆ. ಮದುವೆಯಾದ ಮೇಲೆ ಗಂಡನೊಂದಿಗೆ ಸುಖಿ ಸಂಸಾರ ಸಾಗಿಸುವ ಕನಸು ಕಾಣುತ್ತಿರುವ ಬಹುತೇಕ ಮಹಿಳೆಯರ ಜೀವನ ಅಸಹಾಯಕ ಹಾಗೂ ಅಪಾಯ ಸ್ಥಿತಿಗೆ ಬಂದು ತಲುಪುತ್ತದೆ.

ಈ ಪಿಡುಗನ್ನು ಕಾನೂನಿನಿಂದ ಮಾತ್ರ ತಡೆಗಟ್ಟಲು ಆಗುವುದಿಲ್ಲ. ಇದಕ್ಕಾಗಿ ಒಂದು ದೊಡ್ಡ ಸಾಮಾಜಿಕ ಆಂದೋಲನವೇ ನಡೆಸಬೇಕಾಗಿದೆ.

ಈ ಹಿನ್ನೆಲೆಯಲ್ಲಿ ಇಷ್ಟೆಲ್ಲಾ ಕಾನೂನು ಇದ್ದರೂ, ವರದಕ್ಷಿಣೆಯನ್ನು ತಡೆಗಟ್ಟುವಲ್ಲಿ ಕಾನೂನು ನಿಷ್ಫಲಕಾರಿಯಾಗಿದೆ ಎಂಬುದು ಪರಿಶೀಲನಾರ್ಹ. ಭಾರತದಲ್ಲಿ ಮಹಿಳೆಯರ ಸ್ಥಾನಮಾನವನ್ನು ಕುರಿತು ಅಧ್ಯಯನ ಮಾಡಿ ೧೯೭೪ರಲ್ಲಿ ವರದಿಯನ್ನು ಸಲ್ಲಿಸಿದ ಸಮಿತಿಯ ಪ್ರಕಾರ ವರದಕ್ಷಿಣೆಯ ಪಿಡುಗನ್ನು ಪೂರ್ಣವಾಗಿ ತೊಡೆದುಹಾಕಲಾಗದಿದ್ದರೂ, ಈ ಪಿಡುಗನ್ನು ಹತೋಟಿಯಲ್ಲಿರಿಸುವ ಸ್ಪಷ್ಟ ಉದ್ದೇಶದಿಂದ ಜಾರಿಗೆ ತರಲಾದ ೧೯೬೧ರ ವರದಕ್ಷಿಣೆ ನಿಷೇಧ ಅಧಿನಿಯಮ ತನ್ನ ಉದ್ದೇಶವನ್ನೇ ಸಾಧಿಸುವಲ್ಲಿ ನಿಸ್ಸಂದೇಹವಾಗಿ ವಿಫಲವಾಗಿದೆ ಎಂದು ಅಧ್ಯಯನದ ಆಧಾರದ ಮೇಲಿನ ನಮ್ಮ ಈ ತೀರ್ಮಾನವನ್ನು ದಾಖಲಿಸಲೇಬೇಕಾಗಿದೆ ಎಂದು ಅಭಿಪ್ರಾಯಪಟ್ಟಿತು. ಇದರಿಂದಾಗಿ, ಕಾನೂನಿನಿಂದ ಏನೂ ಉಪಯೋಗವಿಲ್ಲವೆಂದು ಹೇಳಿದಂತಾಗುವುದಿಲ್ಲ. ಬದಲಾಗಿ ಕಾನೂನಿನ ಮಿತಿಯನ್ನು ಸ್ಪಷ್ಟಪಡಿಸಿದಂತಾಗುತ್ತದೆ ಎಂದು ಹೇಳಬಹುದು. ಈ ತರಹದ ಅಧ್ಯಯನ ವಿಶೇಷಗಳಿಂದ ಕಾನೂನುಗಳ ವಿಸ್ತಾರಗೊಳಿಸಬೇಕಾದ ಅಗತ್ಯತೆಯನ್ನು ತೋರಿಸುತ್ತದೆ. ಜೊತೆಗೆ ಕಾನೂನು ಜಾರಿಗೊಳ್ಳಲು ಸಾಮಾಜಿಕ ಬೆಂಬಲದ ಅಗತ್ಯತೆಯನ್ನು ತೋರಿಸುತ್ತದೆ. ಉದ್ದೇಶಿತ ಮತ್ತು ಯೋಜಿತ ಸಾಮಾಜಿಕ ಬದಲಾವಣೆಯನ್ನು ತರುವ ಉದ್ದೇಶವನ್ನೇ ಇಟ್ಟುಕೊಂಡು ಕಾನೂನುಗಳು ೩ ಹಂತಗಳನ್ನು ಒಳಗೊಂಡಿದೆ ಅವುಗಳೆಂದರೆ

೧. ಕಾನೂನು ರಚನೆ ಹಂತ.

೨. ಕಾನೂನು ಜಾರಿಗೊಳಿಸುವ ಹಂತ.

೩. ಕಾನೂನು ಕಾರ್ಯಗತಗೊಳಿಸುವಿಕೆಯಲ್ಲಿ ಸಾರ್ವಜನಿಕರ ಬೆಂಬಲ.

**೧. ಕಾನೂನು ರಚನೆ ಹಂತ:**

ಕಾನೂನು ರಚನೆಕಾರರಿಗೆ ಸಾಮಾಜಿಕ ಬದಲಾವಣೆಯನ್ನು ತರುವ ಬಗ್ಗೆ ಎಷ್ಟೇ ಸ್ಪಷ್ಟ ಕಲ್ಪನೆಗಳಿದ್ದರೂ ಈ ದಿಸೆಯಲ್ಲಿ ಎದುರಾಗಬಹುದಾದ ಅಡ್ಡಿ ಆತಂಕಗಳನ್ನು ಮೊದಲೇ ಊಹಿಸುವುದು ಕಷ್ಟ. ಒಂದು ಸಮಸ್ಯೆಯನ್ನು ಬಗೆಹರಿಸಲು ಕೈಗೊಳ್ಳಲಾಗುವ ಕಾನೂನನ್ನು ರೂಪಿಸುವ ಹಂತದಲ್ಲಿ ಈ ಅಂಶ ಸ್ಪಷ್ಟವೆನಿಸುತ್ತದೆ. ಮುಂದೆ ಎದುರಾಗಬಹುದಾದ ಎಲ್ಲ ಪರಿಸ್ಥಿತಿಗಳನ್ನು ಕಾನೂನು ರೂಪಿಸುವವರು ಮೊದಲೇ ಊಹಿಸಿಕೊಳ್ಳಲಾರರು. ಅಂತೆಯೇ ಕಾನೂನಿಗೆ ವಿರೋಧ ವ್ಯಕ್ತವಾಗಬಹುದು. ಕಾನೂನಿನ ಕೆಲವು ಭಾಗಗಳು ಹೆಚ್ಚು ಪ್ರಭಾವಶಾಲಿಯಾಗದೆ ಇರಬಹುದು. ಸಾರ್ವಜನಿಕರು ಇರುವ ಕಾನೂನನ್ನು ಬಳಸದೇ

ಇರಬಹುದು. ಕಾನೂನಿನಲ್ಲಿಯೆ ಇರಬಹುದಾದ ಕೆಲವು ನ್ಯೂನತೆಗಳಿಂದಾಗಿ ಕಾನೂನು ಪರಿಣಾಮಕಾರಿಯೆನಿಸದೇ ಇರಬಹುದು. ಆದ್ದರಿಂದಲೇ ೧೯೬೧ರಲ್ಲಿ ಮೊದಲಿಗೆ ಜಾರಿಗೆ ತಂದ ಕಾನೂನಿನಲ್ಲಿ ನ್ಯೂನ್ಯತೆಗಳನ್ನು ಗಮನಿಸಿಯೇ ನಂತರ ಅದನ್ನು ತಿದ್ದುಪಡಿಗೆ ಒಳಪಡಿಸಬೇಕಾಯಿತು.

**೨. ಕಾನೂನು ಜಾರಿಗೊಳಿಸುವ ಹಂತ:**

ಒಂದು ಕಾನೂನಿನ ಯಶಸ್ವೀ ಉಪಯೋಗವು, ಕಾನೂನನ್ನು ಜಾರಿಗೊಳಿಸುವ ಹಂತದ ಅಂಶಗಳನ್ನು ಅವಲಂಬಿಸಿದೆ. ಕಾನೂನನ್ನು ಜಾರಿಗೊಳಿಸುವ ಹಂತವು ಕಠಿಣವಾಗಿದೆ. ಹಲವು ಸಾಧನಗಳನ್ನು ಅವಲಂಬಿಸಿರುತ್ತದೆ. ಪೋಲೀಸ್ ಮತ್ತು ಪ್ರಕರಣಗಳನ್ನು ವಿಚಾರಣೆಗೊಳಪಡಿಸುವ ವ್ಯವಸ್ಥೆ ನ್ಯಾಯಾಂಗ ವ್ಯವಸ್ಥೆ ಮತ್ತು ಸಾರ್ವಜನಿಕ ಒತ್ತಡವನ್ನು ಹೇರಬಲ್ಲ ಸಂಘ ಸಂಸ್ಥೆಗಳು ಇವೆಲ್ಲವೂ ಈ ಹಂತದಲ್ಲಿ ಮುಖ್ಯವೆನಿಸುತ್ತವೆ.

**೩. ಕಾನೂನು ಕಾರ್ಯಗತಗೊಳಿಸುವಿಕೆಯಲ್ಲಿ ಸಾರ್ವಜನಿಕರ ಬೆಂಬಲ:**

ಯಾವುದೇ ಪ್ರಕರಣದಲ್ಲಿ ನ್ಯಾಯ ಒದಗಿಸಬೇಕಾದರೆ, ಅದು ಕೇವಲ ಪೋಲೀಸ್ ಇಲಾಖೆ ಒಂದರಿಂದ ಮಾತ್ರವೇ ಸಾಧ್ಯವಿಲ್ಲ. ಅದಕ್ಕೆ ಸಾರ್ವಜನಿಕರು ಮತ್ತು ಸಂಬಂಧಪಟ್ಟ ಜನರೂ ಪೂರ್ಣ ಸಹಕರಿಸಬೇಕಾಗುತ್ತದೆ. ಅಂದರೆ ಸಾಕ್ಷಿ ಹೇಳಬೇಕಾಗುತ್ತದೆ. ಇಂತಹ ಸಾರ್ವಜನಿಕ ಬೆಂಬಲ ಸಾಮಾಜಿಕ ನ್ಯಾಯಕ್ಕೆ ತುಂಬಾ ಅಗತ್ಯವಾದದ್ದು, ನಾಗರಿಕರಿಗೆ ಇಂತಹ ಸಾಮಾಜಿಕ ಬದ್ಧತೆಯ ಅವಶ್ಯಕತೆಯಿದೆ.

ನ್ಯಾಯಾಂಗವು ಬಹಳ ಸೂಕ್ಷ್ಮವಾದದ್ದು, ಸ್ಪಷ್ಟ ಆಧಾರಗಳನ್ನು ಅದು ನಿರೀಕ್ಷಿಸುತ್ತದೆ. ಯಾವುದೇ ಒಬ್ಬ ವ್ಯಕ್ತಿ ತಪ್ಪಿತಸ್ಥನೆಂದು ನ್ಯಾಯಾಧೀಶರಿಗೆ ಮನವರಿಕೆಯಾಗಬೇಕಾದರೆ ಅದನ್ನು ಶಂಕೆಗೆ ಅವಕಾಶವಿಲ್ಲದಂತೆ ಸಾಧಿಸಿ ತೋರಿಸಲು ದೃಢ ಆಧಾರಗಳು ಬೇಕಾಗುತ್ತವೆ. ದೌರ್ಜನ್ಯಕ್ಕೆ ಒಳಗಾದ ವ್ಯಕ್ತಿಯ ಮರಣದ ಅವಧಿಯ ಹೇಳಿಕೆಯನ್ನು ದಾಖಲು ಮಾಡುವ ವೈದ್ಯರಿಂದ ಹಿಡಿದು ಹಲವು ಹಂತಗಳಲ್ಲಿ ನಾನಾ ಜನರ ಸಹಕಾರ ಅವಶ್ಯಕ. ಅಪರಾಧವನ್ನು ಪತ್ತೆ ಮಾಡುವ ದಳವೂ ಆಧುನಿಕ ಸಾಧನಗಳನ್ನು ಹೆಚ್ಚು ಹೆಚ್ಚು ಬಳಸಬೇಕಾದ ಅವಶ್ಯಕತೆಯೂ ಇದೆ. ಉದಾಹರಣೆಗೆ ಸುಳ್ಳನ್ನು ಪತ್ತೆ ಹಚ್ಚುವ ಸಾಧನ, ರಕ್ತ ಸಂಬಂಧವನ್ನು ಗುರುತಿಸುವ ಪರೀಕ್ಷೆ ಹಾಗೂ ವರದಕ್ಷಿಣೆ ಸಾವಿನ ಪ್ರಕರಣಗಳಲ್ಲಿ ಶವ ಪರೀಕ್ಷೆ ಮತ್ತು ಶವಸಂಸ್ಕಾರಗಳನ್ನು ವೀಡಿಯೋ ದಾಖಲಿಸುವ ಮೂಲಕ ದೃಢ ಆಧಾರಗಳನ್ನು ಒದಗಿಸಬಹುದು. ನ್ಯಾಯವನ್ನು ಒದಗಿಸುವಲ್ಲಿ ಇವು ಹೆಚ್ಚು ಸಹಕಾರಿಯೆನಿಸುತ್ತದೆ.

ಹೀಗೆ ವರದಕ್ಷಿಣೆ ನಿಷೇಧ ಕಾಯಿದೆಗಳನ್ನು ಹಲವು ನಿಟ್ಟಿನಲ್ಲಿ ಬಿಗಿಗೊಳಿಸುತ್ತಿದ್ದರೂ ವರದಕ್ಷಿಣೆ ಸಮಸ್ಯೆಯು ಕಡಿಮೆಯಾಗಿಲ್ಲ. ಅದನ್ನು ತಡೆಗಟ್ಟುವ ಕಾನೂನಿನ ಬಿಗಿಯಾದ ವ್ಯವಸ್ಥೆ ಜೊತೆಗೆ ಸಾಮಾಜಿಕ ಬೆಂಬಲ ದೊರಕಿದಾಗ ಮಾತ್ರ ವರದಕ್ಷಿಣೆ ಸಮಸ್ಯೆ ಕುಗ್ಗುವ ಸಾಧ್ಯತೆಯಿದೆ.

**ಉಲ್ಲೇಖಗಳು:-**


೧. ರಾಜಶೇಖರ ಎಸ್:೨೦೦೧;ಭಾರತೀಯ ಸಮಾಜ, ಭ್ರಮರ ಪ್ರಕಾಶನ, ಶಿವಮೊಗ್ಗ.

೨. Gender and Law:2005;Vivekananda Institute for leadership Mysore.

೩. ಗೀತಾಕೃಷ್ಣಮೂರ್ತಿ:೨೦೦೭;ಮಹಿಳೆ ಸಮಾಜ ಕಾನೂನು, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೪. ಸಂ. ನಾಗರಾಜ ಅರಳಿ:೨೦೦೨;ಜನಸಾಮಾನ್ಯರಿಗಾಗಿ ಕಾನೂನು ಮಾಹಿತಿ, ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ, ಬೆಂಗಳೂರು.

೫. ಗೌತಮ್ ಎಸ್.ಆರ್:೨೦೦೨;ನಿತ್ಯ ಜೀವನದಲ್ಲಿ ಕಾನೂನು, ನವಕರ್ನಾಟಕ ಪ್ರಕಾಶನ, ಬೆಂಗಳೂರು.

ಈ ಅಧ್ಯಯನವು ವರದಕ್ಷಿಣೆ ಸಮಸ್ಯೆ ಕುರಿತಾಗಿದ್ದು ಈ ಅಧ್ಯಾಯದಲ್ಲಿ ಪ್ರಕರಣಗಳಿಗೆ ಸಂಬಂಧಿಸಿದಂತೆ ಬಂದ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ. ಜೊತೆಗೆ ಅಧ್ಯಾಯದಲ್ಲಿ ದಾಖಲಾದ ದಾಖಲೇತರ ಪ್ರಕರಣಗಳನ್ನು ಕೂಲಂಕಷವಾಗಿ ಪರಿಶೀಲಿಸಲಾಗಿದೆ. ಜೊತೆಗೆ ವರದಕ್ಷಿಣೆ ಮತ್ತು ವರದಕ್ಷಿಣೇತರ ಕೌಟುಂಬಿಕ ಹಿಂಸೆ ಪ್ರಕರಣಗಳನ್ನು ಕ್ಷೇತ್ರ ಕಾರ್ಯದಿಂದ ಪಡೆದ ಮಾಹಿತಿ ಆಧಾರದ ಮೇಲೆ ಗುರುತಿಸಲಾಗಿದೆ. ಅಧ್ಯಯನ ಅನುಕೂಲಕ್ಕಾಗಿ ದೂರು ದಾಖಲಿಸಿದ ಮಹಿಳೆಯರ ಹೆಸರುಗಳನ್ನು ಬದಲಾದ ಹೆಸರುಗಳಲ್ಲಿ ದಾಖಲಿಸಲಾಗಿದೆ. ಅವರು ಹೇಳಿದ ಮಾಹಿತಿಯನ್ನು ಯಥಾವತ್ತಾಗಿ ಸಾರಾಂಶ ರೂಪದಲ್ಲಿ ದಾಖಲಿಸುತ್ತಾ ವಿಶ್ಲೇಷಿಸಲಾಗಿದೆ.

**ಪ್ರಕರಣ ೧**

ಬಸಪ್ಪ ಮತ್ತು ಯಂಕಮ್ಮ ತಂದೆತಾಯಿಗಳು, ತಮ್ಮ ಮಗಳು ರೂಪಳನ್ನು ಅಳವಂಡಿಯ ನಿಂಗಪ್ಪನಿಗೆ ಮದುವೆ ಮಾಡಿ ಕೊಟ್ಟಿದ್ದರು. ಇವರು ಮದುವೆ ಸಂದರ್ಭದಲ್ಲಿ ನಿಂಗಪ್ಪನಿಗೆ ೧೦ ಸಾವಿರ ರೂಪಾಯಿ ಹಣ ೧ ೧/೨ ತೊಲೆ ಬಂಗಾರ ಕೊಟ್ಟಿದ್ದರು. ನಿಂಗಪ್ಪ ವಿವಾಹ ನಂತರ ರೂಪಳಿಗೆ ಹಣ ತರುವಂತೆ ಒತ್ತಾಯಿಸಿದ. ಅದಕ್ಕಾಗಿ ದೈಹಿಕ ಹಿಂಸೆಯನ್ನು ನೀಡುತ್ತಿದ್ದನು. ಈ ಹಿಂಸೆ ತಾಳಲಾರದೆ ರೂಪ ೩ ಬಾರಿ ತವರು ಮನೆಗೆ ಹೋಗಿದ್ದಳು. ಆಗ ರೂಪಳ ತಂದೆ ತಾಯಿ ಅಳಿಯ ನಿಂಗಪ್ಪನಿಗೆ ತಿಳುವಳಿಕೆ ಹೇಳಿ ಬಿಟ್ಟು ಹೋಗಿದ್ದರು. ಇಷ್ಟಾದರೂ ಮತ್ತೇ ನಿಂಗಪ್ಪ ಅವಳನ್ನು ಹಣಕ್ಕಾಗಿ ಪೀಡಿಸುತ್ತಿದ್ದ. ಇದರಿಂದ ರೂಪಳು ಸೀಮೆ ಎಣ್ಣೆಯನ್ನು ಮೈ ಮೇಲೆ ಸುರಿದುಕೊಂಡು ಬೆಂಕಿ ಹಚ್ಚಿಕೊಂಡು ಸತ್ತಳು. ಇದನ್ನು ವಧುವಿನ ತಂದೆ ತಾಯಿಗಳು ಕೊಪ್ಪಳ ಜಿಲ್ಲೆಯ ಅಳವಂಡಿ ಪೋಲೀಸ್ ಠಾಣೆಯಲ್ಲಿ (೨೧/೦೩ ೪೯೮(ಎ) ೩೦೪, r/w ೩೪ ಐ.ಪಿ.ಸಿ ಮತ್ತು ೩ ಮತ್ತು ೪ ಡಿ. ಪಿ. ಆಕ್ಟ್) ದೂರು ದಾಖಲಿಸಿದ್ದಾರೆ. ಆದರೆ ನಿಂಗಪ್ಪನು ಹೇಳುವ ಪ್ರಕಾರ ನಾನು ದೈಹಿಕ ಹಿಂಸೆ ನೀಡಿದ್ದು ಹಣಕ್ಕಾಗಿ ಅಲ್ಲ ಆಕೆ ನನ್ನ ಮಾತು ಕೇಳುತ್ತಿರಲಿಲ್ಲ. ನನಗೆ ತಿಳಿಸದೆ ಎಲ್ಲಿಗೋ ಹೋಗಿ ಬರುತ್ತಿದ್ದಳು. ಆದರೂ ನಾನು ಸುಮ್ಮನೇ ಇದ್ದೆ, ಆದರೆ ಕೆಲವೊಂದು ಸಲ ಮನೆಗೆ ಹಣ ಬೇಕಾದಾಗ ಅವಳನ್ನು ಕೇಳಿದ್ದೆ, ಅದಕ್ಕೆ ಅವಳು

ಸೀಮೆ ಎಣ್ಣೆ ಸುರಿದುಕೊಂಡು ಸತ್ತಳು. ಆದರೆ ಆ ಸಮಯದಲ್ಲಿ ನಾನು ಮನೆಯಲ್ಲಿ ಇರಲಿಲ್ಲ ಎಂದು ಹೇಳುತ್ತಾನೆ.

**ಪ್ರಕರಣ ೨**

ಗಂಗಾವತಿಯಲ್ಲಿರುವ ಬಸವರಾಜ ಎಂಬುವನಿಗೆ ಕಲ್ಪನಾ ಎಂಬ ಹುಡುಗಿಯನ್ನು ಮದುವೆ ಮಾಡಿ ಕೊಟ್ಟಿದ್ದು, ಮದುವೆ ಸಂದರ್ಭದಲ್ಲಿ ಕಲ್ಪನಾ ತಂದೆ ತಾಯಿಗಳು ಬಸವರಾಜನಿಗೆ ೧.೨೫ ಲಕ್ಷ ರೂಪಾಯಿಯನ್ನು ವರದಕ್ಷಿಣೆ, ೧೧ ತೊಲೆ ಬಂಗಾರವನ್ನು ನೀಡಿದ್ದರು. ಮದುವೆಯಾಗಿ ೧ ತಿಂಗಳಲ್ಲೆ ಬಸವರಾಜ ಹೆಂಡತಿ ಕಲ್ಪನಾಳಿಗೆ ಅನೇಕ ರೀತಿಯಲ್ಲಿ ಹಿಂಸೆ ನೀಡಲು ಪ್ರಾರಂಭಿಸಿದನು. ಅಂದರೆ ಸಿಗರೇಟಿನಿಂದ ಸುಡುವುದು, ಕಟ್ಟಿಗೆಯಿಂದ ಹೊಡೆಯುವುದು, ಅಶ್ಲೀಲ ಮಾತುಗಳನ್ನಾಡಿ ಹಿಂಸಿಸುವುದಲ್ಲದೆ ತಂದೆ ಮನೆಯಲ್ಲಿ ಇಟ್ಟ ೧೧ ತೊಲೆ ಬಂಗಾರ ತಂದು ಕೊಡುವಂತೆ ಒತ್ತಾಯಿಸುತ್ತಿದ್ದನು. ಇದರಿಂದ ಬೇಸತ್ತ ಕಲ್ಪನಾ ತಂದೆ ತಾಯಿಗಳು ಪೋಲೀಸರಲ್ಲಿ ದೂರು ದಾಖಲಿಸಿದ್ದಾರೆ. ಬಸವರಾಜನಿಗೆ ಬೇರೆ ಉದ್ದೇಶ ಇದ್ದವು. ೧೧ ತೊಲೆ ಬಂಗಾರ ತೆಗೆದುಕೊಳ್ಳುವುದು ನಂತರ ಚಿತ್ರ ಹಿಂಸೆ ಮಾಡಿ ಆ ಮೂಲಕ ಅವಳೇ ನನ್ನಿಂದ ವಿವಾಹ ವಿಚ್ಛೇದನ ಪಡೆಯುವಂತೆ ಮಾಡುವುದು, ಇನ್ನೊಂದು ಮದುವೆಯಾಗುವುದು. ಆದರೆ ಕಲ್ಪನಾಳ ಹೇಳಿಕೆಯ ಪ್ರಕಾರ ನನ್ನ ಮದುವೆಯನ್ನು ನಮ್ಮ ಸಂಬಂಧಿಕರಲ್ಲಿ ನನ್ನನು ಮಾಡಿಕೊಟ್ಟರು. ತಂದೆ ತಾಯಿಗಳಿಗೆ ಮತ್ತು ಸಂಬಂಧಿಕರ ಮಾತಿಗೆ ಕಟ್ಟುಬಿದ್ದು ಮದುವೆಯಾದೆ, ಮದುವೆಯಾಗಿ ೧ ತಿಂಗಳಲ್ಲೆ ಪೀಡಿಸಲು ಪ್ರಾರಂಭಿಸಿದನು. ನನ್ನ ವಿದ್ಯಾಭ್ಯಾಸಕ್ಕೆ ತೊಂದರೆ ಕೊಟ್ಟನು. ದಿನಂಪ್ರತಿ ನನ್ನ ಶೀಲದ ಮೇಲೆ ಸಂಶಯ ಪಡುವುದು ಮತ್ತು ಅಶ್ಲೀಲ ಮಾತುಗಳನ್ನಾಡುವುದು ಅಲ್ಲದೆ ಮದುವೆಯಲ್ಲಿನ ೧೧ ತೊಲೆ ಬಂಗಾರವನ್ನು ನಮ್ಮ ತಂದೆ ಮನೆಯಲ್ಲಿ ಇಟ್ಟಿದ್ದೆವು. ಅದನ್ನು ತರುವಂತೆ ಒತ್ತಾಯಿಸುತ್ತಿದ್ದನು. ಈ ಕಾರಣಕ್ಕಾಗಿ ದೈಹಿಕ ಹಿಂಸೆ ನೀಡುತ್ತಿದ್ದನು. ಹೊಡೆಯುವುದು ಸಿಗರೇಟಿನಿಂದ ಸುಡುವುದು ಮಾಡುತ್ತಿದ್ದನು ಆಗಲೂ ಸುಮ್ಮನಿದ್ದೆ. ನನ್ನಿಂದ ವಿವಾಹ ವಿಚ್ಛೇದನ ಪಡೆದು ಇನ್ನೊಂದು ವಿವಾಹ ಮಾಡಿಕೊಳ್ಳುವುದು ಅವನ ಉದ್ದೇಶವಾಗಿತ್ತು. ಅವನು ಮೊದಲು ಒಂದು ಹುಡುಗಿಯನ್ನು ನಾನು ಪ್ರೀತಿಸುತ್ತಿದ್ದೆ ಎಂದು ಪದೇ ಪದೇ ಹೇಳುತ್ತಿದ್ದನು. ನೀನು ಅವಳ ತರಹ ಸುಂದರವಾಗಿಲ್ಲ ಎಂದು ದೈಹಿಕ ಹಿಂಸೆ ನೀಡಿ ನಮ್ಮ ತವರು ಮನೆಗೆ ಕಳುಹಿಸುತ್ತಿದ್ದನು. ಇದರಿಂದ ಬೇಸತ್ತ ಕಲ್ಪನಾ ವಿವಾಹ ವಿಚ್ಛೇದನಕ್ಕೆ ಸಿದ್ಧಳಾಗಿದ್ದಾಳೆ. ಆದರೆ ಕಲ್ಪನಾಳ ತಂದೆ ತಾಯಿಗಳು ಸಂಪ್ರದಾಯ ಮನೆತನದವರಾಗಿದ್ದು ಮರ್ಯಾದೆಗೆ ಅಂಜುತ್ತಿದ್ದು, ಅವರು ಕೇಸು ದಾಖಲಿಸಲು ಹಿಂಜರಿದಿರುವುದಾಗಿ ತಿಳಿಸಿದರು.

**ಪ್ರಕರಣ ೩**

ಗಂಗಾವತಿ ತಾಲ್ಲೂಕಿನ ಹೊಸಳ್ಳಿ ಗ್ರಾಮಸ್ಥನಾದ ಬಸಪ್ಪ ತನ್ನ ಮಗಳು ನೀಲಮ್ಮಳನ್ನು ಅದೇ ಊರಿನ ಕನಕಪ್ಪನಿಗೆ ಮದುವೆ ಮಾಡಿಕೊಟ್ಟನು. ಮದುವೆ ಸಂದರ್ಭದಲ್ಲಿ ಇಪ್ಪತ್ತೈದು ಸಾವಿರ ರೂಪಾಯಿ ವರದಕ್ಷಿಣೆ ನೀಡಿದ್ದರು. ನೀಲಮ್ಮಳು ತಂದೆಯ ಮನೆಯಲ್ಲಿ ಕೂಲಿ ಕೆಲಸಕ್ಕೆ ಹೋಗುತ್ತಿದ್ದಳು. ಮದುವೆಯ ನಂತರ ಗಂಡನ ಮನೆಯಲ್ಲಿ ಕೂಲಿಕೆಲಸಕ್ಕೆ ಹೋಗುವುದನ್ನು ನಿಲ್ಲಿಸಿರುವಳು. ಇದರಿಂದ ಕೋಪಗೊಂಡ ಕನಕಪ್ಪ ಕೂಲಿಕೆಲಸಕ್ಕೆ ಹೋಗುವಂತೆ ಒತ್ತಾಯಿಸುತ್ತಿದ್ದನು. ಜೊತೆಗೆ ತಂದೆ ತಾಯಿಗಳಿಂದ ಹಣ ತರುವಂತೆ ಪೀಡಿಸುತ್ತಿದ್ದನು. ನೀಲಮ್ಮಳು ಕನಕಪ್ಪನ ಮಾತು ಕೇಳಲಿಲ್ಲವೆಂದು ಕತ್ತು ಹಿಸುಕಿ ಸಾಯಿಸಿದನು. ಹಾಗಾಗಿ ಅಳಿಯನೇ ಮಗಳನ್ನು ಕೊಂದನೆಂದು ನೀಲಮ್ಮಳ ತಂದೆ ತಾಯಿಯರು ದೂರು (ಕೇಸನ್ನು) ದಾಖಲಿಸಿದ್ದಾರೆ. ನೀಲಮ್ಮಳ ಗಂಡನು ಹೇಳುವ ಪ್ರಕಾರ, ನಾವು ಬಡವರು ಬದುಕು ಸಾಗಿಸಲು ದಿನನಿತ್ಯ ದುಡಿಯುತ್ತಿದ್ದೆವು. ನನ್ನ ಬದುಕಿಗೆ ಸಹಾಯವಾಗಲೆಂದು ದುಡಿಯುವ ಹುಡುಗಿಯನ್ನು ಮದುವೆಯಾದೆ. ಆದರೆ ಮದುವೆ ನಂತರ ನನ್ನ ಹೆಂಡತಿ ಕೂಲಿಗೆ ಹೋಗುವುದಿಲ್ಲ ಎಂದು ಹೇಳುತ್ತಿದ್ದಳು. ಕೂಲಿಗೆ ಹೋಗು ಎಂದು ಹೇಳುತ್ತಿದ್ದರೂ ಹೋಗುತ್ತಿರಲಿಲ್ಲ. ಇದರಿಂದ ಕೋಪಗೊಂಡು ನಾನು ಕತ್ತು ಹಿಸುಕಿದೆ ಎಂದು ಹೇಳುತ್ತಾನೆ. ಆದರೆ ನೀಲಮ್ಮಳ ತಂದೆ ತಾಯಿಗಳು ಹೇಳುವ ಪ್ರಕಾರ ನನ್ನ ಮಗಳು ಒಳ್ಳೆಯ ಹುಡುಗಿ, ದುಡಿಯುವಂತಹವಳು, ಎದುರು ಮಾತನಾಡುವುದಿಲ್ಲ. ಗಂಡನ ಮನೆಯಲ್ಲಿ ಕೂಲಿ ಕೆಲಸಕ್ಕೆ ಹೋಗಿಲ್ಲ ಅಂದ ಮಾತ್ರಕ್ಕೆ ಅವಳನ್ನು ಸಾಯಿಸುವುದು ಸಾಧ್ಯನಾ? ನನ್ನ ಅಳಿಯನಾದ ಕನಕಪ್ಪನ ಬುದ್ಧಿ ಸರಿಯಾಗಿರಲಿಲ್ಲ. ಅವನು ನನ್ನ ಮಗಳನ್ನು ಹಣಕ್ಕಾಗಿ ದಿನ ಪೀಡಿಸಿ ಹಿಂಸಿಸುತ್ತಿದ್ದನು ಹಾಗೂ ಮನೋವೈಕಲ್ಯದಿಂದ ಬಳಲುತ್ತಿದ್ದು ಯಾರದೋ ಮಾತನ್ನು ಕೇಳಿ ಸಾಯಿಸಿದ್ದಾನೆ ಎಂದು ಹೇಳುತ್ತಾರೆ (ಸಂದರ್ಶನದಲ್ಲಿ ನಿಖರವಾದ ಮಾಹಿತಿ ಸಿಕ್ಕಿಲ್ಲ).

**ಪ್ರಕರಣ ೪**

ಗಂಗಾವತಿ ತಾಲೂಕಿನ ಹೆರೂರು ಗ್ರಾಮದಲ್ಲಿ ರೇಖಾ ಎಂಬುವಳ ಜೊತೆ ಬಸವರಾಜನ ವಿವಾಹವು ೧೭-೦೨-೨೦೦೬ರಂದು ನಡೆಯಿತು. ಆಗ ರೇಖಾಳ ತಂದೆ ತಾಯಿಗಳು ಬಸವರಾಜನಿಗೆ ೧ ಲಕ್ಷ ರೂಪಾಯಿ ನಗದು ಹಣ ಮತ್ತು ೬ ತೊಲೆ ಬಂಗಾರ ಒಡವೆಗಳನ್ನು ವರದಕ್ಷಿಣೆಯಾಗಿ ಕೊಟ್ಟಿದ್ದರು. ಆದರೂ ಬಸವರಾಜ ಮತ್ತು ಅವನ ಮನೆಯ ತಂದೆ ತಾಯಿಯರು, ಸಹೋದರ, ಸಹೋದರಿಯರು ಪಕ್ಕದ ಮನೆಯವರು ತಂದ ವರದಕ್ಷಿಣೆ ಹೋಲಿಸಿ ರೇಖಾಳಿಗೆ ೩೦ ಸಾವಿರ ಹಣ ತೆಗೆದುಕೊಂಡು ಬಾ ಎಂದು ಒತ್ತಾಯಿಸಿದರು. ೧೭-೦೩-೨೦೦೬ರಂದು ಗಂಗಾವತಿಯ ಗ್ರಾಮೀಣ ಪೋಲೀಸ್ ಠಾಣೆಗೆ ರೇಖಾ ದೂರು

ದಾಖಲಿಸಿದರು. ಇದಕ್ಕೆ ರೇಖಾ ತಂದೆ ತಾಯಿಗಳು ಪ್ರೇರೇಪಿಸಿದ್ದಾರೆ. ಈ ಕುರಿತು ಪ್ರತಿಕ್ರಿಯೆ ನೀಡಿರುವ ಬಸವರಾಜ ಮತ್ತು ಆತನ ಮನೆಯವರು ನಾವು ಗೌರವಸ್ಥರು ಆಕೆ ಮನೆಯಲ್ಲಿ ಕೆಲಸ ಸರಿಯಾಗಿ ಮಾಡುತ್ತಿಲ್ಲ ಎಂಬ ಕಾರಣಕ್ಕೆ ಬೈದಿದ್ದೇವೆ. ಈ ಕಾರಣಕ್ಕೆ ರೇಖಾಳ ತಂದೆ ತಾಯಿಗಳು ತಮ್ಮ ಕುಟುಂಬದವರ ಮೇಲೆ ವರದಕ್ಷಿಣೆ ಸಲುವಾಗಿ ರೇಖಾಳಿಗೆ ಕಿರುಕುಳ ನೀಡುತ್ತಿದ್ದಾರೆ ಎಂದು ದೂರು ನೀಡಿದ್ದಾರೆ ಎಂದು ಹೇಳುತ್ತಾರೆ. ರೇಖಾಳ ತಂದೆ ತಾಯಿ ಹೇಳುವ ಪ್ರಕಾರ, ೩೦ ಸಾವಿರ ರೂಪಾಯಿ ಹಣ ತೆಗೆದುಕೊಂಡು ಬಾ ಎಂದು ಒತ್ತಾಯಿಸುತ್ತಾರೆ ಜೊತೆಗೆ ಇದನ್ನು ಮನಸ್ಸಿನಲ್ಲಿ ಇಟ್ಟುಕೊಂಡ ಬಸವರಾಜ ಮತ್ತು ಆತನ ಮನೆಯವರು ಅಡುಗೆಯಲ್ಲಿ ಇತರ ದಿನನಿತ್ಯ ಕೆಲಸ ಕಾರ್ಯಗಳಲ್ಲಿ ತಪ್ಪು ಹುಡುಕಿ ನಿತ್ಯವು ಬೈಯುತ್ತಾರೆ. ನನ್ನ ಮಗಳು ಎರಡು ಮೂರು ಬಾರಿ ಅಡುಗೆ ಮಾಡುವಾಗ ಒನಕೆಯಿಂದ ಹೊಡೆದಿದ್ದಾರೆ. ಈ ಕಾರಣಕ್ಕಾಗಿ ಮಗಳ ಜೀವ ರಕ್ಷಿಸುವ ಮತ್ತು ನಮ್ಮ ಮಗಳ ಬದುಕು ಸರಿದೂಗಿಸುವ ಕಾರಣಗಳನ್ನು ಇಟ್ಟುಕೊಂಡು ಪೋಲೀಸ್ ಠಾಣೆಯಲ್ಲಿ ದೂರು ದಾಖಲಿಸಿದ್ದೇವೆ ಎನ್ನುತ್ತಾರೆ.

**ಪ್ರಕರಣ ೫**

ಕೊಪ್ಪಳ ಜಿಲ್ಲೆಯ ಜೂಲಕಟ್ಟಿಯ ನಿಂಗಮ್ಮಳ ಜೊತೆ ಶಿವಪ್ಪನ ವಿವಾಹವು ೦೨-೦೫-೨೦೦೧ರಲ್ಲಿ ನಡೆದಿತ್ತು. ಆಗ ವರೋಪಚಾರ ಸಹ ಮಾಡಲಾಗಿತ್ತು. ಕೆಲವು ದಿನಗಳವರೆಗೆ ನಿಂಗಮ್ಮನ ಜೊತೆ ಸರಿಯಾಗಿದ್ದ ಶಿವಪ್ಪ, ನಂತರ ೧೦ ಸಾವಿರ ರೂಪಾಯಿ ತೆಗೆದುಕೊಂಡು ಬಾ ಎಂದು ನಿಂಗಮ್ಮನಿಗೆ ಒತ್ತಾಯಿಸಿದ. ಈ ಕಾರಣಕ್ಕಾಗಿ ದಿನವಿಡೀ ಚಿತ್ರ ಹಿಂಸೆ, ಮಾನಸಿಕ, ದೈಹಿಕ ಕಿರುಕುಳ ನೀಡುತ್ತಿದ್ದನು. ಇದರಿಂದ ೦೭-೦೭-೨೦೦೬ರಲ್ಲಿ ನಿಂಗಮ್ಮಳ ತಂದೆ ತಾಯಿಗಳು ಕುಷ್ಟಗಿಯ ತಾಲೂಕಿನ ತಾವರಗೇರಿ ಪೋಲೀಸ್ ಠಾಣೆಯಲ್ಲಿ ದೂರು ದಾಖಲಿಸಿದ್ದಾರೆ. ಈ ಕುರಿತು ನಿಂಗಮ್ಮಳ ಗಂಡ ಹೇಳುವ ಪ್ರಕಾರ, ನಾನು ೧೦ ಸಾವಿರ ರೂಪಾಯಿ ಕೇಳಿದ್ದು ನಿಜ. ಹಣ ಕೇಳಿದಾಗ ಅವಳು ಯಾವುದೇ ಮಾತನಾಡದೆ ಸುಮ್ಮನೆ ಇರುತ್ತಿದ್ದಳು. ನನಗೆ ಹಣ ಅವಶ್ಯಕವಾಗಿತ್ತು. ಮತ್ತೆ ಆ ಹಣವನ್ನು ನಿಮ್ಮ ತವರು ಮನೆಗೆ ಹಿಂತಿರುಗಿಸುತ್ತೇನೆ ಎಂದು ಹೆಂಡತಿಗೆ ಹೇಳಿದ್ದೆ. ಹೆಂಡತಿಯಾದವಳು ಗಂಡನಿಗೆ ಸಹಕರಿಸಬೇಕು. ಆದರೆ ಇದನ್ನು ದೊಡ್ಡ ವಿಷಯ ಮಾಡಿ ನನ್ನ ಮೇಲೆ ದೂರು ದಾಖಲಿಸಿದ್ದಾಳೆ. ನಿಂಗಮ್ಮಳು ಹೇಳುವ ಪ್ರಕಾರ ಮದುವೆಯಾಗಿ ೨ ವರ್ಷಗಳ ತನಕ ಸರಿಯಾಗಿದ್ದರು. ನಂತರ ಹಣಕ್ಕಾಗಿ ಪೀಡಿಸುತ್ತಿದ್ದರು. ಯಾವತ್ತಾದರೂ ಒಂದು ಸಲ ಹಣ ಕೇಳಿದರೆ ಪರವಾಗಿಲ್ಲ. ಆದರೆ ಇವರು ಯಾವಾಗಲೂ ದುಡ್ಡು ತೆಗೆದುಕೊಂಡು ಬಾ ಎಂದರೆ ಎಲ್ಲಿಂದ ತರುವುದು. ಅವನು ಬಹಳ ಸುಳ್ಳುಗಾರ, ಹಣಕ್ಕಾಗಿ ಏನಾದರೂ ಸುಳ್ಳು ಹೇಳುತ್ತಾನೆ. ಇದನ್ನು ಕೇಳಿ ತಲೆನೋವು ಆಯಿತು. ಅವನ ಜೊತೆ ಜೀವನ ಸಾಗಿಸುವುದು ಸಾಧ್ಯವಿಲ್ಲ ಎನ್ನುತ್ತಾಳೆ ಈ ಕಾರಣ ದೂರು ನೀಡಿದ್ದೇನೆ ಎನ್ನುತ್ತಾಳೆ.

**ಪ್ರಕರಣ ೬**

ಗಂಗಾವತಿಯ ಹೊಸಳ್ಳಿಯಲ್ಲಿರುವ ಕರಿಯಪ್ಪನ ತಂಗಿಯಾದ ಶಂಕ್ರಮ್ಮನ ಜೊತೆ ಸೂಗಪ್ಪನ ವಿವಾಹವಾಯಿತು. ಸೂಗಪ್ಪನ ಅಕ್ಕನನ್ನು (ಶರಣಮ್ಮ) ಕರಿಯಪ್ಪನಿಗೆ ವಿವಾಹ ಮಾಡಿಕೊಡಲಾಗಿತ್ತು. ಅಂದರೆ ಇವರ ವಿವಾಹವು ಎದುರು ಬದುರು ಒಪ್ಪಂದದ ವಿವಾಹವಾಗಿತ್ತು. ಈ ವಿವಾಹದಲ್ಲಿ ಕೊಡು ಕೊಳ್ಳುವುದರಲ್ಲಿ ಯಾವುದೇ ರೀತಿಯ ಸಮಸ್ಯೆಯಾಗಿಲ್ಲ. ಮದುವೆಯಾಗಿ ೧ ವರ್ಷ ನಂತರ ಸೂಗಪ್ಪನು ತನ್ನ ಹೆಂಡತಿ ಶಂಕ್ರಮ್ಮ ಕಪ್ಪುಬಣ್ಣದವಳಾಗಿದ್ದಾಳೆ ಅವಳ ಜೊತೆ ಹೊರಗಡೆ ಹೋಗಲು ಮುಜುಗರವಾಗುತ್ತದೆ ಎಂದು ಅವಳನ್ನು ಕೀಳಾಗಿ ಕಾಣುತ್ತಿದ್ದ. ಮತ್ತೆ ಹೀರೋಹೊಂಡಾ ಬೈಕ್ ಬೇಕೆಂದು ಅವಳ ಜೊತೆ ದಿನಾಲು ಜಗಳವಾಡುವುದು, ಬೈಯುವುದು, ದೈಹಿಕ ಹಿಂಸೆ ನೀಡುವುದು ಮಾಡುತ್ತಿದ್ದನು. ಇದರಿಂದ ಕೋಪಗೊಂಡ ಅವಳ ಅಣ್ಣ ಕರಿಯಪ್ಪನು, ತನ್ನ ಹೆಂಡತಿ ಶರಣಮ್ಮಳನ್ನು ಅಂದರೆ ಸೂಗಪ್ಪನ ಅಕ್ಕಳನ್ನು ಹಿಂಸಿಸಲು ಪ್ರಾರಂಭಿಸಿದನು. ಜೊತೆಗೆ ತಂಗಿ ಶಂಕ್ರಮ್ಮನಿಂದ ಸೂಗಪ್ಪನ ವಿರುದ್ಧ ೨೦೦೩ರಲ್ಲಿ ಗಂಗಾವತಿಯಲ್ಲಿ ದೂರು ನೀಡಿದನು.

ಸೂಗಪ್ಪ ಹೇಳುವ ಪ್ರಕಾರ ತನ್ನ ಅಕ್ಕನ ಮದುವೆಗೋಸ್ಕರ ಕಪ್ಪಗಿರುವ ಹುಡುಗಿಯನ್ನು ಮದುವೆಯಾಗಲು ಒಪ್ಪಿಕೊಂಡೆ ವಿನಹ ಆಗ ನನಗೆ ಆಕೆ ಇಷ್ಟವಿರಲಿಲ್ಲ. ನನಗೆ ಬೈಕ್ ಅವಶ್ಯಕವಾಗಿತ್ತು. ಅದಕ್ಕೋಸ್ಕರವಾಗಿ ನಾನು ನನ್ನ ಹೆಂಡತಿಯನ್ನು ಬೈಕ್ ಕೇಳಿದ್ದೆ. ಅದಕ್ಕೆ ಅವಳು ಎದುರು ಮಾತನಾಡಿದಳು. ಇದನ್ನು ಸಹಿಸಲಾರದೆ ನನ್ನ ಅಕ್ಕನನ್ನು (ಶರಣಮ್ಮ) ತವರು ಮನೆಗೆ ಕಳಿಸಿದನು. ಮತ್ತು ಈ ದೂರನ್ನು ಆಕೆಯ ಅಣ್ಣನು ದಾಖಲಿಸಿದ್ದಾನೆ. ಕರಿಯಪ್ಪನ ಹೇಳಿಕೆ ಪ್ರಕಾರ ಎದುರು ಬದುರು ಒಪ್ಪಂದದಿಂದ ವಿವಾಹವಾಯಿತು. ಅವನು ನನ್ನ ತಂಗಿಯನ್ನು ದೈಹಿಕ ಹಿಂಸೆ ನೀಡಿ ಸಾಯಿಸುವುದಕ್ಕೆ ಪ್ರಯತ್ನಿಸಿದ್ದಾನೆ. ಆದರೂ ನಾನು ಅವನ ಅಕ್ಕನಿಗೆ ಅಂದರೆ ನನ್ನ ಹೆಂಡತಿಗೆ ಏನು ಹಿಂಸೆ ನೀಡಿಲ್ಲ. ನನ್ನ ಹೆಂಡತಿಯನ್ನು ಅವಳ ತವರುಮನೆಗೆ ಕಳಿಸಿ, ನನ್ನ ತಂಗಿ ಅನುಭವಿಸಿದ ದುಃಖವನ್ನು ಅವಳು ಅನುಭವಿಸಬೇಕು ಎಂದು ಹೇಳಿರುವನು.

ಶರಣಮ್ಮ (ಸೂಗಪ್ಪನ ಅಕ್ಕ) ನಾನು ಗಂಡನ ಮನೆಯಲ್ಲಿ ಚೆನ್ನಾಗಿದ್ದೆ, ಆದರೆ ನನ್ನ ತಮ್ಮನಿಗೆ ಹುಡುಗಿ ಇಷ್ಟ ಇರಲಿಲ್ಲ. ನನಗೋಸ್ಕರ ಮದುವೆಯಾದ, ಏಕೆಂದರೆ ನನ್ನ ಭವಿಷ್ಯ ಹಾಳಾಗುತ್ತದೆ ಎಂಬ ಭಯಕ್ಕಾಗಿ. ಅವನು ತನ್ನ ಮದುವೆಗೆ ಒಪ್ಪಿದ ಶಂಕ್ರಮ್ಮ (ಕರಿಯಪ್ಪನ ತಂಗಿ) ಹೇಳುವ ಪ್ರಕಾರ ನಾನು ಕಪ್ಪು ಇದ್ದೀನಿ ಅಂತ ಬೈಯುತ್ತಿದ್ದು ನನ್ನ ಯಾಕೆ ಮದುವೆಯಾದರು. ಮದುವೆಯಾಗಿ ೧ ವರ್ಷದ ನಂತರ ದಿನಾಲು ದೈಹಿಕ ಹಿಂಸೆ ನೀಡುತ್ತಿದ್ದ ಇದನ್ನು ಸಹಿಸಿಕೊಂಡು ಇದ್ದೆ. ಬೇಕಂತಲೇ ಬೈಕು ಕೊಡಿಸು ಅಂತ ಜಗಳ ಮಾಡಲು

ಪ್ರಾರಂಭಿಸಿದ. ನಿನ್ನದು ಕಪ್ಪು ಬಣ್ಣ ಇದರಿಂದ ನಿನ್ನ ಜೊತೆ ಹೊರಗಡೆ ಹೋಗಲು ನಾಚಿಕೆಯಾಗುತ್ತದೆ ಎಂದು ಹಿಂಸಿಸುತ್ತಿದ್ದನು. ಇದರಿಂದ ನನ್ನ ಅಣ್ಣನ ಮನೆಯಲ್ಲಿ ಇದ್ದೀನಿ. ಎಲ್ಲಾ ಜನ ನನ್ನನ್ನೇಕೆ ಗಂಡ ಬಿಟ್ಟವಳು ಎಂದು ಹೀಯಾಳಿಸುತ್ತಿದ್ದಾರೆ. ನಾನು ಏನು ತಪ್ಪು ಮಾಡಿದ್ದೇನೆ ನೀವೇ ಹೇಳಿರಿ ಎಂದು ಪ್ರಶ್ನೆ ಕೇಳುತ್ತಾ ಗಳಗಳನೇ ಅತ್ತಳು.

**ಪ್ರಕರಣ ೭**

ಗಂಗಾವತಿ ತಾಲೂಕಿನ ಇಂದ್ರಗಿ ಗ್ರಾಮದ ಕುರುಬರ ಮರಿಯಪ್ಪ ತನ್ನ ತಂಗಿ ದುರುಗಮ್ಮಳನ್ನು ಅದೇ ಊರಿನ ಹನುಮಂತಪ್ಪನಿಗೆ ಮದುವೆ ಮಾಡಿ ಕೊಟ್ಟಿದ್ದನು. ಮದುವೆ ಸಂದರ್ಭದಲ್ಲಿ ವರದಕ್ಷಿಣೆ ವರೋಪಚಾರ ನೀಡಲಿಲ್ಲ. ಆದರೆ ಹನುಮಂತಪ್ಪ ಮದುವೆ ನಂತರ ಕೆಲವು ದಿನಗಳವರೆಗೆ ಹೆಂಡತಿ ದುರುಗಮ್ಮಳೊಂದಿಗೆ ಸುಖವಾಗಿದ್ದು, ನಂತರ ತನ್ನ ತಾಯಿಯೊಡನೆ ಸೇರಿ ದುರುಗಮ್ಮಳಿಗೆ ವರದಕ್ಷಿಣೆ ತೆಗೆದುಕೊಂಡು ಬರಲು ಹಿಂಸಿಸತೊಡಗಿದನು. ಈ ಹಿಂಸೆ ಜೀವ ತೆಗೆಯುವ ಹಂತಕ್ಕೆ ಹೋಯಿತು. ಇದನ್ನು ತಿಳಿದ ಅವಳ ಅಣ್ಣ ಮರಿಯಪ್ಪ ಪೋಲೀಸ್ ಠಾಣೆಯಲ್ಲಿ ದೂರು ನೀಡಿದರು. ಈ ಪ್ರಕರಣ ಈಗ ನ್ಯಾಯಾಲಯದ ಮುಂದಿದ್ದು ನ್ಯಾಯಾಧೀಶರು ಪ್ರಕರಣವನ್ನು ಸಿ.ಓ.ಡಿ ತನಿಖೆಗೆ ಆದೇಶಿಸಿದ್ದಾರೆ. ಬೆಂಗಳೂರು ತನಿಖಾಧಿಕಾರಿಯಿಂದ ಈ ತನಿಖೆ ನಡೆಯುತ್ತಿದೆ. ಈ ಬಗೆಗೆ ಮರಿಯಪ್ಪ ಹೀಗೆ ಹೇಳುತ್ತಾನೆ. ತನ್ನ ತಂಗಿಯನ್ನು ಎಷ್ಟು ದೈಹಿಕ ಹಿಂಸೆ ನೀಡಿದರೂ ನಾನು ಸುಮ್ಮನಿದ್ದು ಹಣ ರೂ.೫೦೦ ರಿಂದ ರೂ.೨೦೦೦ದವರೆಗೆ ಕೊಟ್ಟು ಕಳುಹಿಸಿದ್ದೆ. ಆದರೆ ಅವನಿಗೆ ವಿವಿಧ ಚಟಗಳಿವೆ, ಚಟಗಾರನಾಗಿದ್ದು, ನನ್ನ ತಂಗಿಯನ್ನು ಹಣಕ್ಕಾಗಿ ಸಾಯಿಸಿದ. ನಾನು ಈಗ ಎಲ್ಲಿಂದ ಸಾಕ್ಷಿ ತರಲಿ ಏನು ಮಾಡಲು ಸಾಧ್ಯ. ನಾವು ಬಡವರು ಕೋರ್ಟಿಗೆ ಹೋಗಲು ಸಾಧ್ಯವೇ ಎಂದು ಪ್ರಶ್ನಿಸಿದರು.

**ಪ್ರಕರಣ ೮**

ಗಂಗಾವತಿ ಹಿರೇಜಂತಕಲ್ ವೀರೇಶರವರ ಮಗಳು ಶ್ವೇತಳನ್ನು ಗಂಗಾವತಿಯ ರಮೇಶನಿಗೆ ಮದುವೆ ನಿಶ್ಚಿತಾರ್ಥವಾಗಿದ್ದು ಈ ಸಮಯದಲ್ಲಿ ೧ ಲಕ್ಷ ರೂಪಾಯಿ ವರದಕ್ಷಿಣೆ ಮುಂಗಡ ಹಣಕೊಟ್ಟಿದ್ದರು. ಇದಾದ ಒಂದು ವಾರದಲ್ಲಿ ರಮೇಶ ಗಂಗಾವತಿಯ ರಾಜೇಶ್ವರಿಯೊಂದಿಗೂ ೧ ಲಕ್ಷ ರೂಪಾಯಿ ವರೋಪಚಾರ ಪಡೆದ ವಿವಾಹ ನಿಶ್ಚಿತಾರ್ಥ ಮಾಡಿಕೊಳ್ಳುತ್ತಾನೆ. ಅಂದರೆ ಎರಡು ವಧುಗಳ ಮನೆಯಿಂದ ವರದಕ್ಷಿಣೆ ಹಣ ಪಡೆಯುತ್ತಾನೆ. ಇದಾದ ಮೂರು ತಿಂಗಳ ನಂತರದಲ್ಲಿ ಮೊದಲ ನಿಶ್ಚಿತಾರ್ಥ ಮಾಡಿಕೊಂಡ ಶ್ವೇತ ತಂದೆ ತಾಯಿಗೆ ಎರಡನೆ ನಿಶ್ಚಿತಾರ್ಥ ವಿಷಯ ತಿಳಿದು ೪೨೦ ಐ.ಪಿ.ಸಿ ಮತ್ತು ೩, ೪ ಡಿ.ಪಿ ಆಕ್ಟ್‌ನಲ್ಲಿ

ಗಂಗಾವತಿ ಪೋಲಿಸ್ ಠಾಣೆಯಲ್ಲಿ ದೂರು ದಾಖಲಿಸುತ್ತಾರೆ. ಅದರಲ್ಲಿ ರಮೇಶನಿಂದ ನಮಗೆ ಮೋಸವಾಗಿದೆ ನಾವು ನೀಡಿದ ೧ ಲಕ್ಷ ವರದಕ್ಷಿಣೆ ನಮಗೆ ವಾಪಸು ಕೊಡಿಸಿ ಮತ್ತು ಇಂತಹ ವಂಚಕರಿಗೆ ಶಿಕ್ಷೆ ವಿಧಿಸುವಂತೆ ಒತ್ತಾಯಿಸಿದ್ದಾರೆ.

**ಪ್ರಕರಣ ೯**

ಕೊಪ್ಪಳ ಜಿಲ್ಲೆಯ ಅಳವಂಡಿ ಮಾರೆಪ್ಪನ ಜೊತೆ ನಿರ್ಮಲಾ ವಿವಾಹವಾಗಿದ್ದು, ವಿವಾಹ ಸಮಯದಲ್ಲಿ ಒಂದು ರೆಫ್ರಿಜರೇಟರ್, ಎರಡು ಫ್ಯಾನ್‌ಗಳು, ೫ ತೊಲೆ ಬಂಗಾರ, ೬೦ ಸಾವಿರ ರೂ.ಗಳ ನಗದು ವರದಕ್ಷಿಣೆ ಕೊಟ್ಟಿದ್ದರು. ಆದರೆ ೮ ತಿಂಗಳ ನಂತರ ಚಿತ್ರಹಿಂಸೆ ನೀಡಿ, ನಿರ್ಮಲಾಳ ಗಂಡ ಮನೆಯವರು ಹಣಕ್ಕಾಗಿ ನಿರ್ಮಲಾಳನ್ನು ಸಾಯಿಸಿದ್ದು ಎಂದು ನಿರ್ಮಲಾ ತಂದೆ ರಮೇಶ ಅಳವಂಡಿ ಪೋಲೀಸ್ ಠಾಣೆಯಲ್ಲಿ ೪೯೮(ಎ) ೩೦೪ಬಿ ಐ.ಪಿ.ಸಿ ೩ ಮತ್ತು ೪ ಡಿ.ಪಿ. ಆಕ್ಟ್‌ನಲ್ಲಿ ದೂರು ದಾಖಲಿಸಿದರು.

ನಿರ್ಮಲಾಳ ತಂದೆ ರಮೇಶರ ಪ್ರಕಾರ ನನ್ನ ಮಗಳು ಒಳ್ಳೆಯ ವಿದ್ಯಾವಂತೆ, ವಿದ್ಯಾಭ್ಯಾಸ ಮುಗಿದ ನಂತರ ಕೆಲಸಕ್ಕೆ ಸೇರಬೇಕೆಂದು ಆಸೆ ಇತ್ತು. ಆದರೆ ನಾನೇ ವರನ ಮನೆತನ ಚೆನ್ನಾಗಿದೆ ಎಂದು ವಿವಾಹ ಮಾಡಿಕೊಟ್ಟೆ. ಅವರು ಕೇಳಿದ ಎಲ್ಲಾ ವಸ್ತುಗಳನ್ನು ನಮ್ಮ ಸಂಬಂಧಿಕರಲ್ಲಿ ಸಾಲ ಮಾಡಿ ತಂದು ಕೊಟ್ಟೆ. ಅವರು ಮಗಳಿಗೆ ನಾವು ಬಡವರು ಎಂದು ಕಿರುಕುಳ ನೀಡಿ ಹೀಯಾಳಿಸುತ್ತಿದ್ದರು. ಇಂಥವರು ನಮ್ಮಂಥವರ ಮನೆತನದೊಂದಿಗೆ ಯಾಕೆ ಮದುವೆಗೆ ಒಪ್ಪಿಕೊಂಡರು ಎಂಬುದು ರಮೇಶನ ಪ್ರಶ್ನೆ.

**ಪ್ರಕರಣ ೧೦**

ರೇಣುಕಮ್ಮಳ ಜೊತೆ ಗ್ಯಾನಪ್ಪ ವಿವಾಹವಾಗಿದ್ದು, ೬ ವರ್ಷಗಳ ತನಕ ಸುಖಸಂಸಾರ ಸಾಗಿಸಿದ್ದು, ನಂತರ ಗ್ಯಾನಪ್ಪ ಪ್ರತಿದಿನ ಬಂಗಾರ, ಹಣವನ್ನು ತವರು ಮನೆಯಿಂದ ತೆಗೆದುಕೊಂಡು ಬಾ ಎಂದು ಹೆಂಡತಿಗೆ ಕಿರುಕುಳ ನೀಡಲು ಪ್ರಾರಂಭಿಸಿದನು ಎಂದು ರೇಣುಕಮ್ಮ ತಾವರಗೇರಾ ಪೋಲೀಸ್ ಠಾಣೆಯಲ್ಲಿ ದೂರನ್ನು ಸಿ.ಸಿ.ನಂ.೩೬೭/೦೫ ೧೨-೦೩-೨೦೦೭ರಂದು ಸೆಕ್ಷನ್ ಅಡಿಯಲ್ಲಿ ದಾಖಲಿಸಿದ್ದಾರೆ. ಗ್ಯಾನಪ್ಪ ಹೇಳುವ ಪ್ರಕಾರ, ನಾನು ಮದುವೆಯಾಗಿ ೬ ವರ್ಷವಾಗಿದ್ದು ಮತ್ತು ಸುಖವಾಗಿದ್ದೆವು. ಈಗ ಕೆಲವು ದಿನಗಳು ಜೀವನದಲ್ಲಿ ಕಷ್ಟ ಅನುಭವಿಸಿದ್ದೆ. ಇದರಿಂದ ತವರು ಮನೆಯವರು ಹಣವಂತರಾಗಿದ್ದು ಸಹಾಯ ಮಾಡಿರೆಂದು ಕೇಳಿದೆ. ಈ ಕಾರಣಕ್ಕಾಗಿ ನನ್ನ ಹೆಂಡತಿ ದೂರು ದಾಖಲಿಸಿದ್ದಾರೆ.

ಈ ಕುರಿತು ರೇಣುಕಮ್ಮ ಹೇಳುವ ಪ್ರಕಾರ, ಕುಟುಂಬದಲ್ಲಿ ಸುಖವಾಗಿದ್ದೆವು ಅವರು ಯಾರದೋ ಮಾತುಕೇಳಿ ನನ್ನನು ಹಿಂಸಿಸಲು ಪ್ರಾರಂಭಿಸಿದರು. ಅಶ್ಲೀಲ ಮಾತುಗಳನ್ನಾಡಿದ್ದು, ದೈಹಿಕ ಹಿಂಸೆ ನೀಡಲು ಪ್ರಾರಂಭಿಸಿದರು. ಇದರಿಂದಾಗಿ ಕೇಸು ದಾಖಲಿಸಿದೆವು. ನಂತರ ಒಪ್ಪಂದದಿಂದ ಕೇಸು ಹಿಂತೆಗೆದುಕೊಂಡಿದ್ದು ಈಗ ನಮ್ಮ ಇಬ್ಬರ ನಡುವೆ ಯಾವುದೇ ಜಗಳ ಇಲ್ಲ ಎಂದು ಹೇಳಿದ್ದಾಳೆ.

**ಪ್ರಕರಣ ೧೧**

ಕನ್ನಡಪ್ರಭ – ಮೇ ೧೪ ೨೦೦೭ರಂದು "ವರದಕ್ಷಿಣೆಗಾಗಿ ತಾಯಿ ಮಗುವಿಗೆ ಬೆಂಕಿ ಹಚ್ಚಿ ಕೊಲೆ" ಎನ್ನುವ ಶೀರ್ಷಿಕೆಯ ವರದಿಯಾಗಿದ್ದು ಮಹಾರಾಷ್ಟ್ರದ ಸೋಲಾಪುರದ ನಾಗಪ್ಪ ಕೊಡತೆ ಅವರ ಮಗಳನ್ನು (ನೀಲವ್ವ) ಆರು ವರ್ಷದ ಹಿಂದೆ ಹುಬ್ಬಳ್ಳಿಯಲ್ಲಿ ಕಿರಾಣಿ ವ್ಯಾಪಾರ ಮಾಡುತ್ತಿದ್ದ, ತೊಲಗಿ ಗ್ರಾಮದ ವೀರೇಶನಿಗೆ ಮದುವೆ ಮಾಡಿಕೊಡಲಾಗಿತ್ತು. ಮದುವೆ ಸಂದರ್ಭದಲ್ಲಿ ೫೦ ಸಾವಿರ ರೂಪಾಯಿ ನಗದು ಹಾಗೂ ೧೦ ತೊಲೆ ಚಿನ್ನಾಭರಣವನ್ನು ವರದಕ್ಷಿಣೆಯಾಗಿ ನೀಡಿದ್ದರು. ಅತ್ತೆ ಮಾವ ಹಾಗೂ ಮೈದುನ ವರದಕ್ಷಿಣೆಗಾಗಿ ಕಿರುಕುಳ ನೀಡುತ್ತಿದ್ದರು. ವರದಕ್ಷಿಣೆಗಾಗಿಯೇ ನೀಲವ್ವಳನ್ನು ಬೆಂಕಿ ಹಚ್ಚಿ ಕೊಲೆ ಮಾಡಲಾಗಿದೆ ಎಂದು ಆರೋಪಿಸಿ ನಂದಗಡ ಪೋಲಿಸ್ ಠಾಣೆಯಲ್ಲಿ ನೀಲವ್ವ ತಂದೆ ತಾಯಿಗಳು ಮತ್ತು ಸಂಬಂಧಿಕರು ದೂರು ದಾಖಲಿಸಿದರು. ನೀಲವ್ವ ಹಾಗೂ ಮಗುವನ್ನು ಕೊಠಡಿಯೊಳಗೆ ಕೂಡಿ ಹಾಕಿ ಬೆಂಕಿ ಹಚ್ಚಲಾಗಿತ್ತು. ಮಹಿಳೆ ಕೂಗಿಕೊಳ್ಳಲು ಆರಂಭಿಸಿದಾಗ ನೆರೆ ಹೊರೆಯವರು ಬಾಗಿಲು ತೆರೆದು ಬೆಂಕಿ ನಂದಿಸಿದರು. ಅಷ್ಟರಲ್ಲಿ ಆಕೆಯ ದೇಹ ಶೇ೯೦ರಷ್ಟು ಸುಟ್ಟಿತ್ತು ಮಗು ಸಾವಿಗೀಡಾಗಿತ್ತು ಎಂದು ಪತ್ರಿಕೆಯಲ್ಲಿ ವರದಿಯಾಗಿದೆ.

**ಪ್ರಕರಣ ೧೨**

ಪ್ರಜಾವಾಣಿ ಪತ್ರಿಕೆಯಲ್ಲಿ "ವರದಕ್ಷಿಣೆ ಹಿಂಸೆ ಆರೋಪ ಮುಕ್ತ ವಿ.ವಿ.ರೀಡರ್ ಬಂಧನ" ಎಂಬ ಶೀರ್ಷಿಕೆಯಲ್ಲಿ ೨೩–೦೫–೨೦೦೭ರಂದು ವರದಿಯಾಗಿದೆ. ಇದರ ಪ್ರಕಾರ ಮೈಸೂರು ವಿಶ್ವವಿದ್ಯಾಲಯದ ವಿಶ್ರಾಂತ ಕುಲಪತಿ ಡಾ. ರುದ್ರಪ್ಪ ಅವರ ಮಗಳು ಡಾ. ಸುಧಾ ಜೊತೆ ಕರ್ನಾಟಕ ಮುಕ್ತ ವಿಶ್ವವಿದ್ಯಾಲಯ ರೀಡರ್ ಎಂ. ವೆಂಕಟೇಶರವರು ೧೩ವರ್ಷಗಳ ಹಿಂದೆ ವಿವಾಹ ನಡೆದಿತ್ತು. ಮದುವೆಯ ಸಮಯದಲ್ಲಿ ಒಂದು ಲಕ್ಷ ರೂಪಾಯಿ ನಗದು ಚಿನ್ನಾಭರಣಗಳನ್ನು ವರದಕ್ಷಿಣೆಯಾಗಿ ನೀಡಲಾಗಿತ್ತು. ವೆಂಕಟೇಶ್ ಮದುವೆಯಾದ ನಂತರವೂ ತವರು ಮನೆಯಿಂದ ಮತ್ತಷ್ಟು ವರದಕ್ಷಿಣೆ ತರುವಂತೆ ಸುಧಾಳಿಗೆ ದೈಹಿಕ ಹಿಂಸೆ ನೀಡುತ್ತಿದ್ದರು. ಹಲವು ಕಾರಣಗಳಿಗೆ ಗಂಡ – ಹೆಂಡತಿ ನಡುವೆಯೂ ಆಗಾಗ ಜಗಳ ನಡೆಯುತ್ತಿದ್ದು. ಇತ್ತೀಚೆಗೆ

ಹೊಸ ಮನೆಯನ್ನು ಕಟ್ಟಿಸಿದ್ದೆವು ಅದಕ್ಕೆ ಸಾಲ ಮಾಡಿದೆವು. ಸಾಲ ತೀರಿಸಲು ಸಂಬಳದ ಹಣ ನೀಡುವಂತೆ ಒತ್ತಾಯಿಸುತ್ತಿದ್ದು ಡಾ. ಸುಧಾಗೆ ದೈಹಿಕ ಹಿಂಸೆಯನ್ನು ಜೊತೆಗೆ ಕೆಲ ಖಾಲಿ ಚೆಕ್‌ಗಳಿಗೆ ಬಲವಂತವಾಗಿ ಸಹಿ ತೆಗೆದುಕೊಂಡಿದ್ದರು ಎಂದು ದೂರು ದಾಖಲಿಸಿದ್ದಾರೆ. ಸುಧಾ ದಂಪತಿಗೆ ಇಬ್ಬರು ಹೆಣ್ಣು ಮಕ್ಕಳಿದ್ದಾರೆ. ಗಂಡು ಮಗು ಆಗಲಿಲ್ಲ ಎಂಬ ಕಾರಣದಿಂದ ಹೆಚ್ಚಿನ ಹಿಂಸೆ ನೀಡುತ್ತಿದ್ದರು ಎಂದು ಸುಧಾ ದೂರಿದ್ದಾರೆ. ಆರೋಪಿಯನ್ನು ಮಹಿಳಾ ಪೋಲೀಸ್ ಠಾಣೆಯವರು ಬಂದಿಸಿದ್ದು, ದೇವರಾಜ ಠಾಣೆ ಪೋಲಿಸರು ವಿಚಾರಣೆ ನಡೆಸಿದ್ದಾರೆ. ಡಾ॥ ಸುಧಾ ಮೈಸೂರು ಚೆಲುವಾಂಬ ಆಸ್ಪತ್ರೆಯಲ್ಲಿ ವೈದ್ಯರಾಗಿದ್ದು ಈಗ ಆರೋಪಿ ವೆಂಕಟೇಶ್ ಅವರನ್ನು ನ್ಯಾಯಾಲಯದ ಮುಂದೆ ಹಾಜರು ಪಡಿಸಿ ನ್ಯಾಯಂಗ ಬಂಧನಕ್ಕೆ ಒಪ್ಪಿಸಲಾಗಿದೆ.

**ಪ್ರಕರಣ ೧೩.**

ಹಾಯ್ ಬೆಂಗಳೂರು ಪತ್ರಿಕೆಯಲ್ಲಿ "ಯಾರೂ ಸಿಗದಿದ್ರೆ ಹೆಂಡತಿಗೇ ಒದೆ ಕೊಡ್ತಾನೆ" ಎಂಬ ಶೀರ್ಷಿಕೆಯು ಮೇ೨೫ ೨೦೦೭ರಂದು ವರದಿಯಾಗಿದ್ದು ಈ ವರದಿಯ ಪ್ರಕಾರ ದೊಡ್ಡ ಬಳ್ಳಾಪುರದ ಮರಳೇನಹಳ್ಳಿಯ ನಾರಾಯಣಸ್ವಾಮಿಯ ಮಗ ಇನ್ಸ್‌ಪೆಕ್ಟರ್ ಶ್ರೀನಿಧಿಯ ಜೊತೆ ಜ್ಯೋತಿಶ್ರೀಯ ವಿವಾಹವಾಗಿತ್ತು. ಮೊದಲು ವರದಕ್ಷಿಣೆಯೇ ಬೇಡ ಅಂದಿದ್ದ ಶ್ರೀನಿಧಿ ಆಮೇಲೆ ಸಾಕಷ್ಟು ಬಂಗಾರ ಹಾಕುವಂತೆ ಕೇಳಿದನು. ಬೆಂಗಳೂರಿನ ಬಂಟ್ಸ್ ಸಂಘದ ಛತ್ರದಲ್ಲಿ ಅದ್ದೂರಿಯ ಮದುವೆ ಮಾಡಿಸಿಕೊಂಡನು. ಅಂದರೆ ೧೯೯೮ರ ಜೂನ್ ತಿಂಗಳಲ್ಲೇ ಹನ್ನೆರಡು ಲಕ್ಷ ಖರ್ಚು ಮಾಡಿ ಮದುವೆ ಮಾಡಿಕೊಟ್ಟಿದ್ದರು. ಅವತ್ತೇ ಶ್ರೀನಿಧಿ ಬೆಳ್ಳಿ ತಟ್ಟೆಯಲ್ಲಿ ನನ್ನ ಕಾಲು ತೊಳೆಯಲಿಲ್ಲ ಅಂತ ರಗಳೆ ತೆಗೆದಿದ್ದ ಶ್ರೀನಿಧಿ ತನ್ನ ಶರ್ಟಿನ ಭುಜಕ್ಕೆ ಸ್ಟಾರ್ ಹಾಕಿಲ್ಲ, ಬೂಟು ಪಾಲಿಶ್ ಮಾಡಿಲ್ಲ ಲೇಸು ಕಟ್ಟಿಲ್ಲ ಅಂತ ಜಗಳ ತೆಗೆದು, ಈ ಕಾರಣಕ್ಕಾಗಿ ಹೆಂಡತಿ ಜ್ಯೋತಿಶ್ರೀಯನ್ನು ಬಾಯಿಗೆ ಸಿಕ್ಕಂತೆ ಬೈದಿದ್ದಾನೆ. ನಿನ್ನ ಹೆಂಡತಿದು ಜಾಸ್ತಿಯಾಯ್ತು ಅಂತ ಶ್ರೀನಿಧಿಯ ತಾಯಿ ಜಯಲಕ್ಷ್ಮಮ್ಮ ಮತ್ತು ಅಣ್ಣ ಶ್ರೀನಿವಾಸ ಸಹ ಶ್ರೀನಿಧಿಗೆ ಹೇಳಿದ್ದಾರೆ. ಸಿಕ್ಕಾಪಟ್ಟೆ ಸಿಟ್ಟಿಗೆದ್ದ ಶ್ರೀನಿಧಿ ಹೆಂಡತಿಯ ಕಣ್ಣು, ಕೆನ್ನೆ, ಭುಜ, ತಲೆ ಹೀಗೆ ಸಿಕ್ಕ ಕಡೆಗೆ ಬಡಿದಿದ್ದಾನೆ. ತಾಳಿ ಕಿತ್ತುಕೊಂಡಿದ್ದಾನೆ. ಕಾಲುಂಗುರ ಕಿತ್ತು ಕೊಂಡಿದ್ದಾನೆ. ಎಚ್ಚರ ತಪ್ಪಿ ಬಿದ್ದ ಜ್ಯೋತಿಶ್ರೀಗೆ ಚಿಕಿತ್ಸೆಯನ್ನು ನೀಡದೆ ಹೊರಟು ಹೋಗಿದ್ದನು, ವಿಜಯನಗರ ಪೋಲಿಸರು ವರದಕ್ಷಿಣೆ ಕಿರುಕುಳ ಕೇಸು ಹಾಕಿದ್ದಾರೆ (ಹಲ್ಲೆ ನಡೆಸಿದ್ದನ್ನು ಮರೆ ಮಾಚಿದ್ದಾರೆ) ಎಂದು ಪತ್ರಿಕೆಯಲ್ಲಿ ವರದಿಯಾಗಿದೆ.

ಮೇಲಿನ ಎಲ್ಲ ಪ್ರಕರಣಗಳನ್ನು ಪರಿಶೀಲಿಸಿದಾಗ ಹೆಂಡತಿಯು ಸರಿಯಾಗಿ ಮನೆಯಲ್ಲಿ ಕೆಲಸ ಮಾಡುವುದಿಲ್ಲ. ಅವಳ ಶೀಲದ ಮೇಲೆ ಸಂಶಯ, ಅವಳು ತೆಳ್ಳಗೆ ಇರುವ ಕಾರಣಕ್ಕಾಗಿ,

ಅವಳು ಕಪ್ಪುಬಣ್ಣ ಇರುವ ಕಾರಣಕ್ಕಾಗಿ, ಅವಳು ದಪ್ಪ ಇರುವ ಕಾರಣಕ್ಕಾಗಿ ಅವಳನ್ನು ಹೊಡೆಯುವುದು, ನೀನು ಸುಂದರವಾಗಿಲ್ಲ ಎನ್ನುವ ಕಾರಣಕ್ಕಾಗಿ ವಧುವಿನ ತಂದೆ ತಾಯಿ, ಅಣ್ಣ ದೂರು ದಾಖಲಿಸುತ್ತಾರೆ.

ಕುಟುಂಬದಲ್ಲಿ ಮಹಿಳೆಯರು ಕಿರುಕುಳದಿಂದ ಸತ್ತಾಗ, ಅಥವಾ ಬದುಕಿದಾಗ ಎಲ್ಲಾದಕ್ಕೂ ಮುಂಚೆ ಪೋಲಿಸರಿಗೆ ವಿಷಯ ತಿಳಿಸುವವರು ಮತ್ತು ಪ್ರಕರಣ ದಾಖಲಿಸುವವರು ವಧುವಿನ ತಂದೆ ತಾಯಿಗಳು ಮಹಿಳೆಯು ಯಾವ ಸಮಸ್ಯೆಗೆ ಬಲಿಯಾಗಿದ್ದಾಳೆ, ಯಾವುದಕ್ಕಾಗಿ ಕಿರುಕುಳ ನಡೆದಿದೆ. ಅದಕ್ಕೆ ಪ್ರತಿಕ್ರಿಯೆ ಏನು? ಎಂಬುದನ್ನು ಬಿಟ್ಟು, ಮಹಿಳೆಯರ ಪ್ರತಿಯೊಂದು ಸಮಸ್ಯೆಗಳನ್ನು ವರದಕ್ಷಿಣೆ ಸಮಸ್ಯೆಯೆಂದು ದೂರು ದಾಖಲಿಸುವರು, ಪ್ರಚಾರ ಮಾಡುವವರು ವಧುವಿನ ತಂದೆ ತಾಯಿ ಅಥವಾ ವಧುವಿನ ಸಂಬಂಧಿಕರು. ಮಹಿಳೆಯರ ಕೌಟುಂಬಿಕ ಸಮಸ್ಯೆಗಳಲ್ಲಿ ಕುಟುಂಬದ ಸದಸ್ಯರು ಪಾಲುದಾರರಾಗುತ್ತಾರೆ. ಇದರಿಂದ ಇಂದಿನ ಮಹಿಳೆಯರಿಗೆ ವರದಕ್ಷಿಣೆಯೇ ದೊಡ್ಡ ಸಮಸ್ಯೆಯಾಗಿ ಪರಿವರ್ತನೆಯಾಗುತ್ತಿದೆ.

ಮನೆಯಲ್ಲಿ ನಡೆಯುವಂಥ ಪ್ರತಿಯೊಂದು ಸಮಸ್ಯೆಗಳನ್ನು ವರದಕ್ಷಿಣೆ ಸಮಸ್ಯೆಯಾಗಿ ತಿರುಚುವುದರಿಂದ ಮಹಿಳೆಯರ ನಿಜವಾದ ಸಮಸ್ಯೆಯೇನು ಎನ್ನುವುದು ತಿಳಿಯುವುದಿಲ್ಲ. ಅವಳ ಬಗ್ಗೆ ಅತೃಪ್ತಿ, ಅವಳ ಸೌಂದರ್ಯದ ಬಗ್ಗೆ ತಿರಸ್ಕಾರ, ತವರು ಮನೆಯನ್ನು ನಿಂದಿಸುವುದು ಮುಂತಾದ ಬಗೆಯ ಜಗಳಗಳನ್ನು ವರದಕ್ಷಿಣೆಯ ಹಿಂಸೆ ಎನ್ನುವುದು ತಪ್ಪು. ಇನ್ನೊಂದು ಅಂಶವೆಂದರೆ ಗಂಡನು ಹೀನಾಯವಾಗಿ ಕೀಳಾಗಿ ನೋಡಿದರೆ ಅವಳನ್ನು ಕಡೆಗಣಿಸಿದರೆ, ಟೀಕಿಸಿದರೆ ದೈಹಿಕ ಹಿಂಸೆಗಳಿಗೆ ವರದಕ್ಷಿಣೆ ಕಿರುಕುಳ ಎಂದು ಹೇಳುವುದು ಸಮಂಜಸವಲ್ಲ. ಆದರೆ ಈ ರೀತಿಯ ಹಿಂಸೆ ಅನುಭವಿಸಿದ ಮಹಿಳೆಯ ಮನೋಭಾವನೆಯು ಅವಳನ್ನು ಅಸಹಾಯಕಳಾಗಿ ಮಾಡಿರುವುದಷ್ಟೇ ಅಲ್ಲದೆ, ಅವರ ಸಮಸ್ಯೆಗೆ ನಿಖರವಾದ ಪರಿಹಾರ ಕಂಡುಕೊಳ್ಳಲು ಆಗುವುದಿಲ್ಲ.

ಅದೇ ರೀತಿ ಪ್ರಕರಣ ೧ ರಲ್ಲಿ ವರದಕ್ಷಿಣೆಗಾಗಿ ಸಾವು ಸಂಭವಿಸಿದೆ ಎನ್ನುವುದು ದಾಖಲಾಗಿದೆ. ಈ ಪ್ರಕರಣದಲ್ಲಿ ದಿನಗೂಲಿ ಮಾಡುವಂತನಾಗಿದ್ದು ಗಂಡನು ಹೆಂಡತಿಯನ್ನು ಹೊಡೆಯುವುದು, ಬಡಿಯುವುದು ಮಾಡಿದ್ದಾನೆ. ಅವಳು ಗಂಡನ ಮಾತು ಕೇಳುತ್ತಿರಲಿಲ್ಲ ಎನ್ನುವುದೇ ಆಕೆಯ ಗಂಡನ ಮುಖ್ಯ ಅಸಮಾಧಾನವಾಗಿದೆ. ಹೆಂಡತಿಯನ್ನು ಸಂಶಯದಿಂದ ಕಾಣಲು ಪ್ರಯತ್ನಸಿದ್ದಾನೆ. ಅಥವಾ ತನ್ನ ಮಾತು ಕೇಳದೆ ಇದ್ದಾಗ ಉಗ್ರವಾಗಿ ಖಂಡಿಸಿದ್ದಾನೆ. ಅವಳನ್ನು ಬಂಧನದಲ್ಲಿ ಇಟ್ಟಿರುವನು. ಅದಕ್ಕಾಗಿ ಅವಳು ಸತ್ತಳು ಎಂದು ಹೇಳಲಾಗುತ್ತಿದೆ.

ಆದರೆ ಪ್ರಕರಣದ ಬಗ್ಗೆ ವಧುವಿನ ತಂದೆ ತಾಯಿಗಳು ವರದಕ್ಷಿಣೆ ಸಮಸ್ಯೆ ಎಂದು ಕೇಸು ದಾಖಲಿಸಿರುವರು.

ಪ್ರಕರಣ – ೨ರಲ್ಲಿ ವಿದ್ಯಾವಂತ ಗಂಡ ಬಸವರಾಜ ಕಲ್ಪನಾಗಳಿಗೆ ದೈಹಿಕ/ಮಾನಸಿಕ ಹಿಂಸೆ ನೀಡುತ್ತಿರುವುದು, ಅವಳು ತೆಳ್ಳಗೆ ಇರುವ ಕಾರಣಕ್ಕಾಗಿ, ಸುಂದರ ಇಲ್ಲದ ಕಾರಣಕ್ಕಾಗಿ ಮತ್ತು ನನಗಿಂತ ಹೆಚ್ಚು ಓದಿದ್ದಾಳೆ (ಪಿಹೆಚ್.ಡಿ) ಮತ್ತು ಇವಳಿಗೆ ಕೊಟ್ಟ ಬಂಗಾರವನ್ನು ಕಿತ್ತುಕೊಂಡು ಬೇರೆ ಹುಡುಗಿಯನ್ನು ಮದುವೆಯಾಗುವ ಉದ್ದೇಶ ಇರುವುದು ಸ್ಪಷ್ಟವಾಗುತ್ತದೆ. ವಧುವಿನ ತಂದೆ ತಾಯಿಗಳು ಹಣ-ಬಂಗಾರವನ್ನು ವರದಕ್ಷಿಣೆಯೆಂದು ಕೊಡುವ ಬದಲು ಮಗಳಿಗೆ ಭದ್ರತೆಗಾಗಿ ನೀಡಿದರೆ ಅಥವಾ ಕನಿಷ್ಠ ಪಕ್ಷ ವರದಕ್ಷಿಣೆ ಬದಲು ಸ್ತ್ರೀಧನವನ್ನು ನೀಡಿದರೆ ಯಾರನ್ನು ಅವಲಂಬನೆಯಾಗದೆ ಅಥವಾ ಗಂಡನಿಂದ ಕಿರುಕುಳ ಸಂಭವಿಸಿದಾಗ ಸ್ವಂತಃ ಆ ಆಸ್ತಿಯ ಮೇಲೆ ಜೀವನ ಸಾಗಿಸಬಹುದು. ಇಂಥ ಅನೇಕ ವಧುವಿನ ತಂದೆ ತಾಯಿಯರು ದುಃಖ ಪಡುವುದರ ಬದಲು ತಮ್ಮ ಆಸ್ತಿಯಲ್ಲಿ ಸಮಪಾಲು ಕೊಡಲು ಮುಂದಾಗಬೇಕಾಗಿದೆ.

ಪ್ರಕರಣ – ೩ರಲ್ಲಿ ಗಮನಿಸಿದಂತೆ ಕೂಲಿಕೆಲಸ ಮಾಡುವ ವ್ಯಕ್ತಿಯು ತನ್ನ ಕುಟುಂಬದ ಆಸರೆಯಾಗಿ ದುಡಿಯುವಂತಹ ಹೆಂಡತಿಯನ್ನು ಮದುವೆ ಮಾಡಿಕೊಂಡಿದ್ದು ತಿಳಿದು ಬರುತ್ತದೆ. ವ್ಯಕ್ತಿಯ ಮೂಲ ಉದ್ದೇಶವು ದುಡಿಯುವಂತಹ ಮಹಿಳೆಯನ್ನು ಮದುವೆಯಾದರೆ ಕುಟುಂಬಕ್ಕೆ ಆರ್ಥಿಕ ಸಹಾಯವಾಗುತ್ತದೆ. ಹೀಗಾಗಿ ಹೊರಗೆ ದುಡಿಯಲು ನಿರಾಕರಿಸಿದ ಹೆಂಡತಿಯನ್ನು ಪೀಡಿಸಲು ಪ್ರಾರಂಭಿಸಿದನು. ಇದು ಕೌಟುಂಬಿಕ ಕಿರುಕುಳ ಪ್ರಕರಣದಲ್ಲಿ ಬರುವಂಥ ಸಮಸ್ಯೆಯಾಗಿದ್ದು ಆದರೆ ಇದನ್ನು ವರದಕ್ಷಿಣೆಯ ಸಮಸ್ಯೆಯಾಗಿ ಪರಿವರ್ತಿಸಲಾಗಿದೆ. ಆದ್ದರಿಂದ ಇಂತಹ ಪ್ರಕರಣವು ವರದಕ್ಷಿಣೆಯೆನ್ನುವುದು ಸಮಂಜಸವಲ್ಲ. ಜೊತೆಗೆ ಪೋಲೀಸ್ ನ್ಯಾಯಾಂಗ ಕೇಸ್‌ಗಳನ್ನು ಕೌಟುಂಬಿಕ ಹಿಂಸೆ ಕಾಯ್ದೆಯಲ್ಲಿ ವರ್ಗಾಯಿಸಬೇಕಾಗಿದೆ.

ಅದರಂತೆ ಪ್ರಕರಣ – ೪ರಲ್ಲಿ ವರದಕ್ಷಿಣೆ ಹಣವು ಕೊಟ್ಟಿದ್ದರೂ ಸಹ ಹಣಕ್ಕಾಗಿ ಹೆಂಡತಿ ದೈಹಿಕ ಹಿಂಸೆ ನೀಡುವುದು ಕಂಡು ಬರುತ್ತದೆ. ಜೊತೆಗೆ ಅವಳ ಕೆಲಸವು ತೃಪ್ತಿಕರವಾಗಿಲ್ಲ ಎಂದು ಹೇಳಲಾಗುತ್ತದೆ. ಇದು ವರದಕ್ಷಿಣೆ ಕಿರುಕುಳವಾಗಿದ್ದು ಇದರಿಂದ ಕುಟುಂಬದ ಸದಸ್ಯರು ವರದಕ್ಷಿಣೆಗಾಗಿ ಅವಳನ್ನು ಮಾನಸಿಕ-ದೈಹಿಕವಾಗಿ ಹಿಂಸಿಸುತ್ತಾರೆ. ಇದರಿಂದ ಕೌಟುಂಬಿಕ ಹಿಂಸೆ ಸ್ವರೂಪ ಅನಾವರಣಗೊಳ್ಳುತ್ತಿದೆ.

ಈ ಎಲ್ಲ ಪ್ರಕರಣಗಳಲ್ಲಿ ಪ್ರತಿಯೊಂದು ಮಹಿಳೆಯರ ಇತರ ಸಮಸ್ಯೆಗಳನ್ನು ವರದಕ್ಷಿಣೆ ಸಮಸ್ಯೆಯೆಂದು ಪರಿವರ್ತಿಸುವುದು ಕಂಡುಬರುತ್ತದೆ. ಇದರಿಂದ ಮಹಿಳೆಯ ಸಮಸ್ಯೆಗಳನ್ನು ಮರೆಮಾಚಲಾಗುತ್ತದೆ. ವಧುವಿನ ಕಡೆಯವರ ಹಿತಾಸಕ್ತಿಗಳು ಮಹಿಳೆಯ ಎಲ್ಲ ಸಮಸ್ಯೆಗಳನ್ನು ವರದಕ್ಷಿಣೆಯೇ ಎನ್ನಿಸಿಕೊಳ್ಳುವಂತೆ ರೂಪಿಸಿ, ಜೊತೆಗೆ ಮಹಿಳೆಯರ ಹೇಳಿಕೆಗಳನ್ನು ಪರಿಗಣಿಸದೆ ಅವರ ತಂದೆ ತಾಯಿಗಳು ಮತ್ತು ಸಂಬಂಧಿಕರ ಹೇಳಿಕೆಗಳಿಗೆ ಪರಿಗಣಿಸುವಂತದ್ದು ಕಾಣುತ್ತೇವೆ. ಆದ್ದರಿಂದ ಕೆಲವೊಂದು ನಿಖರವಾಗಿ ವರದಕ್ಷಿಣೆ ಹಣಕ್ಕಾಗಿ ಪ್ರಕರಣಗಳು ದಾಖಲಾಗಿದ್ದು ಗೋಚರಿಸುವುದು ಕಂಡುಬಂದರು. ಇನ್ನುಳಿದ ಪ್ರಕರಣಗಳು ವರದಕ್ಷಿಣೆಗಾಗಿ ಕಿರುಕುಳ ಎಂದು ದಾಖಲಾಗಿವೆ. ಒಟ್ಟಿನಲ್ಲಿ ಪ್ರಸ್ತುತ ಅಧ್ಯಯನ ಎಲ್ಲ ಪ್ರಕರಣಗಳನ್ನು ವರದಕ್ಷಿಣೆ ಕೇಸಿನಲ್ಲಿ ದಾಖಲಿಸುವುದನ್ನು ನೋಡಿದಾಗ ಈ ಕೇಸುಗಳನ್ನು ದಾಖಲಿಸುವವರು ಮಹಿಳೆಯ ತಂದೆತಾಯಿರು ಮತ್ತು ಅವರ ಸಂಬಂಧಿಕರೇ ಆಗಿರುತ್ತಾರೆ, ಮತ್ತು ಪ್ರಚಾರ ಮಾಡುವವರು. ವರದಕ್ಷಿಣೆ ಕಾಯಿದೆ ಅಡಿಯಲ್ಲಿ ಪ್ರಕರಣಗಳು ದಾಖಲಾಗುವುದರಿಂದ ಮಹಿಳೆ ಸಮಸ್ಯೆ ಪರಿಹಾರ ಅಂತು ಖಂಡಿತವಾಗಿ ದೊರೆಯುವುದಿಲ್ಲ. ಏಕೆಂದರೆ ಸಮಸ್ಯೆ ಬೇರೆ ಆಗಿರುವುದರಿಂದ ಪರಿಹಾರ ಫಲಪ್ರದವಾಗುವುದಿಲ್ಲ. ಆದ್ದರಿಂದ ಈ ಹಿನ್ನೆಲೆಯಿಂದ ಬಂದ ಕಾನೂನುಗಳು ಸಹ ವಿಫಲವಾಗುತ್ತಿವೆ. ಈ ವಿಫಲತೆ ಏನನ್ನೂ ಸೂಚಿಸುತ್ತದೆ ಎಂದರೆ ವರದಕ್ಷಿಣೆ ಸಮಸ್ಯೆ ನೋಡುವ ಅಧ್ಯಯನಕಾರ ಚಳುವಳಿಗಾರರ, ಕಾನೂನುಗಾರರಲ್ಲಿ ಸಮಸ್ಯೆ ಇದೆ ಎಂಬುದನ್ನು ತೋರಿಸುತ್ತದೆ. ಹಾಗಾಗಿ ವರದಕ್ಷಿಣೆ ಸಮಸ್ಯೆಯನ್ನು ನೋಡುವ ದೃಷ್ಟಿಕೋನ ಬದಲಾಗಬೇಕಾಗಿದೆ. ಈ ಸಮಸ್ಯೆಗಳ ಪರಿಹಾರಕ್ಕೆ ಸ್ತ್ರೀವಾದಿ ಚಿಂತಕಿಯರಾದ ಮಧುಕೀಶ್ವರ್‌ರವರ ದೃಷ್ಟಿಕೋನ ಸೂಕ್ತವಾಗಿದೆ ಎಂದು ಪ್ರಸ್ತುತ ಅಧ್ಯಯನದಲ್ಲಿ ಭಾವಿಸಲಾಗಿದೆ. ಈ ದೃಷ್ಟಿಯನ್ನು ಮುಂದಿನ ಅಧ್ಯಾಯಗಳಲ್ಲಿ ಚರ್ಚಿಸಲಾಗಿದೆ.

ಮಹಿಳೆಯರ ಮೇಲೆ ನಡೆಯುವ ಅನೇಕ ದೌರ್ಜನ್ಯಗಳಲ್ಲಿ ಕೌಟುಂಬಿಕ ಹಿಂಸೆ ಸೇರಿದೆ. ಈ ತರಹದ ಕೌಟುಂಬಿಕ ಹಿಂಸೆ ಮಹಿಳೆಯರ ಮೇಲೆ ಅನೇಕ ಕಾರಣಗಳಿಗಾಗಿ ನಡೆಯುತ್ತದೆ. ಕೌಟುಂಬಿಕ ಹಿಂಸೆ ನಡೆಯಲು ಸಾಮಾಜಿಕ, ಸಾಂಸ್ಕೃತಿಕ ಮತ್ತು ಆರ್ಥಿಕ ಕಾರಣಗಳಿರಬಹುದು. ಅದರ ಸ್ವರೂಪವು ಸಹ ಪ್ರದೇಶ, ಜಾತಿ, ವರ್ಗಕ್ಕೆ ತಕ್ಕಂತೆ ಭಿನ್ನವಾಗಿದೆ. ಇದನ್ನು ನಿಯಂತ್ರಿಸಲು ಬಂದ ಕಾಯಿದೆಗಳು ಸಹ ಸಮಾಜ ಬದಲಾವಣೆಗೆ ತಕ್ಕಂತೆ ಮರು ತಿದ್ದುಪಡಿಗೊಂಡಿವೆ. ಪ್ರಸ್ತುತ ಈ ಅಧ್ಯಯನವು, ಕೌಟುಂಬಿಕ ಹಿಂಸೆ ಎಂಬ ದೊಡ್ಡ **'ಅಜೆಂಡ್'**ದಲ್ಲಿ ವರದಕ್ಷಿಣೆ ಸಂಬಂಧ ಕೌಟುಂಬಿಕ ಹಿಂಸೆ, ಅದರ ಸ್ವರೂಪ ಮತ್ತು ಅದನ್ನು ನಿಯಂತ್ರಿಸಲು ಕಾಯಿದೆಗಳನ್ನು ವಿಶ್ಲೇಷಿಸಲು ಪ್ರಯತ್ನಿಸುತ್ತದೆ.

ಈ ಅಧ್ಯಯನದ ಆಸಕ್ತಿಯ ಸಂಗತಿಯೆಂದರೆ ವರದಕ್ಷಿಣೆಗಾಗಿ ಮಹಿಳೆಯರ ಮೇಲೆ ಹಿಂಸೆ ನಡೆಯುತ್ತಿದೆಯೇ ಅಥವಾ ಕೌಟುಂಬಿಕ ಹಿಂಸೆಗಳ ವರದಕ್ಷಿಣೆ ಕಾಯ್ದೆ ಅಡಿ ದಾಖಲಿಸಿದ್ದಾರೆಯೇ ಎಂಬ ಪ್ರಶ್ನೆಗಳನ್ನು ಹಾಕಿಕೊಂಡು ಅಧ್ಯಯನ ಮಾಡುವುದು. ಪ್ರಕರಣಗಳ ಮೂಲಕ ಕೌಟುಂಬಿಕ ಹಿಂಸೆ ಸ್ವರೂಪ ಚರ್ಚಿಸಲಾಗಿದೆ.

**ಕೌಟುಂಬಿಕ ಹಿಂಸೆ ಅರ್ಥ, ವ್ಯಾಪ್ತಿ**

ಸಾಮಾನ್ಯವಾಗಿ ಹಿಂಸೆ ಎನ್ನುವ ಪದವು 'ಮಾನವ' ದೇಹದ ಮೇಲೆ ನಡೆಯುವ ಆಕ್ರಮಣ, ಹಲ್ಲೆ ಎಂಬ ಅರ್ಥದಲ್ಲಿ ಬಳಕೆಯಾಗಿದೆ. ಆದರೆ ಹಿಂಸೆ ಎನ್ನುವುದು ಕೇವಲ ದೇಹವನ್ನು ಮಾತ್ರವಲ್ಲ ಮನಸ್ಸನ್ನು ಘಾಸಿಗೊಳಿಸುವ ಉದ್ದೇಶ ಹೊಂದಿದೆ ಎಂದು ಈ ಅಧ್ಯಯನ ಪರಿಭಾವಿಸುತ್ತದೆ. ಹಿಂಸೆ ಎನ್ನುವ ಕ್ರಿಯೆಯಲ್ಲಿ ಕನಿಷ್ಟ ಇಬ್ಬರು ಇರುತ್ತಾರೆ. ಅದರಲ್ಲಿ ಒಬ್ಬರು ಹಿಂಸೆ ನೀಡುವವರು, ಇನ್ನೊಬ್ಬರು ಹಿಂಸೆ ಅನುಭವಿಸುವವರಾಗಿರುತ್ತಾರೆ. ಆದರೆ ಹಿಂಸೆ ಎನ್ನುವ ಪ್ರಕ್ರಿಯೆಯಲ್ಲಿ ಇಬ್ಬರಿಗಿಂತ ಹೆಚ್ಚಿನ ಸಂಖ್ಯೆಯ ವ್ಯಕ್ತಿಗಳು ಮತ್ತು ಸಾಮಾಜಿಕ ಸಂಸ್ಥೆಗಳು ಸೇರಿರುತ್ತವೆ. ಹಿಂಸೆ ಎನ್ನುವುದು ಹಲವು ಸಂದರ್ಭಗಳಲ್ಲಿ ಸಮಾಜದ ಕಣ್ಣಿಗೆ ಗೋಚರವಾಗುವ ರೂಪದಲ್ಲಿ ಕಂಡುಬಂದರೆ, ಇನ್ನು ಅನೇಕ ಸಂದರ್ಭದಲ್ಲಿ ಸಮಾಜದ ಗಮನಕ್ಕೆ ಬಾರದಂಥ ರೀತಿಯಲ್ಲಿ ನಡೆಯುತ್ತಿವೆ. ಎರಡು ರೂಪದ ಹಿಂಸೆಗಳು ಕುಟುಂಬ ಎನ್ನುವ ಸಾಮಾಜಿಕ

ಸಂಸ್ಥೆಯಲ್ಲಿ ನಡೆಯುತ್ತಿರುವುದನ್ನು ಕೌಟುಂಬಿಕ ಹಿಂಸೆ ಎಂದು ಕರೆಯುತ್ತೇವೆ. ಈ ಕುರಿತಂತೆ ಅನೇಕ ಅಧ್ಯಯನಗಳು ನಡೆದಿವೆ. ಅದರಲ್ಲಿ ಮಹಿಳೆ ಮತ್ತು ಕೌಟುಂಬಿಕ ಹಿಂಸೆ ಮುಖ್ಯವಾದುದು. ಇದರಲ್ಲಿ ಡಾ. ಎಂ. ಇಂದಿರಾರವರು 'ಕುಟುಂಬದಲ್ಲಿ ಕೌಟುಂಬಿಕ ಹಿಂಸೆ ವಿಶೇಷವಾಗಿ ಅನ್ವಯಿಸುವುದು ಮಹಿಳೆಯರಿಗೆ ಮತ್ತು ಹೆಣ್ಣು ಮಕ್ಕಳಿಗೆ' ಎನ್ನುತ್ತಾರೆ.

ಕೌಟುಂಬಿಕ ದೌರ್ಜನ್ಯಗಳು ಲಿಂಗತ್ವದ ಆಧಾರದ ಮೇಲೆ ದೈಹಿಕವಾಗಿ, ಮಾನಸಿಕವಾಗಿ ಮತ್ತು ಕುಟುಂಬದ ಮಹಿಳೆಯ ಮೇಲೆ ಮನೆಯ ಸದಸ್ಯರೇ ನಡೆಸುವ ಹಿಂಸೆ. ಇದು ಸಣ್ಣ ಏಟಿನಿಂದ ಹಿಡಿದು ಕ್ರೂರವಾದ ದೈಹಿಕ ಹೊಡೆತ, ಅಪಹರಣ, ಹೆದರಿಸುವುದು, ಬೈಗಳು, ಆಸ್ತಿಯ ನಾಶ, ಲೈಂಗಿಕ ಹಿಂಸೆ, ಕೌಟುಂಬಿಕ ಬಲತ್ಕಾರ, ಮಾನಸಿಕ ಹಿಂಸೆ, ವರದಕ್ಷಿಣೆ ಮತ್ತು ಅದಕ್ಕೆ ಸಂಬಂಧಪಟ್ಟಂತಹ ಹಿಂಸೆಗಳು ಸೇರಿವೆ.



ಒಟ್ಟಿನಲ್ಲಿ ನಾಗರಿಕ ಜಗತ್ತನ್ನು ದಿಗ್ಭ್ರಮೆಗೊಳಿಸುವಂಥ ಬಗೆಗಳಲ್ಲಿ ಕುಟುಂಬ ಎನ್ನುವ ಸಂಸ್ಥೆಯ ಒಳಗೆ ಮಹಿಳೆಯ ವಿರುದ್ಧ ದೌರ್ಜನ್ಯಗಳು ನಡೆಯುತ್ತಿವೆ. ಈ ಬಗೆಗೆ ಸಮೀಕ್ಷೆ ಮಾಡಿದ ಸಮಿತಿ, ಮಾಧ್ಯಮದ ವರದಿಗಳು, ಭಾರತದ ಕೌಟುಂಬಿಕ ಹಿಂಸೆಗಳ ಸಂಖ್ಯೆ ಅಧಿಕವಾಗಿದೆ ಎಂದು ಸೂಚನೆ ನೀಡುತ್ತವೆ.



**ಭಾರತದ ಕೌಟುಂಬಿಕ ಹಿಂಸೆ ಸಂಬಂಧಿ ಅಂಕಿ-ಅಂಶಗಳು**

ರಾಷ್ಟ್ರೀಯ ಕುಟುಂಬ ಆರೋಗ್ಯ ಸಮೀಕ್ಷೆ ಪ್ರಕಾರ "ದೇಶದ ಶೇ. ೩೭.೨ರಷ್ಟು ಮಹಿಳೆಯರು ಕೌಟುಂಬಿಕ ಹಿಂಸೆಯ ಅನುಭವ ಹೊಂದಿದ್ದಾರೆ. ಮಹಿಳೆ ಹಿಂಸೆಯು ನಗರ ಪ್ರದೇಶದಲ್ಲಿ ಮತ್ತು ಶೇ. ೩೦.೪ರಷ್ಟು ಗ್ರಾಮೀಣ ಪ್ರದೇಶದಲ್ಲಿ ಶೇ. ೪೦.೨ರಷ್ಟು ಆಗಿದೆ. ಆದರೆ ಬಿಹಾರದಲ್ಲಿ ನಗರ ಪ್ರದೇಶದಲ್ಲಿ ಶೇ. ೬೨.೨ರಷ್ಟು ಗ್ರಾಮೀಣ ಪ್ರದೇಶದಲ್ಲಿ ಶೇ. ೫೮.೫ರಷ್ಟು ಹೆಚ್ಚಾಗಿದೆ. ಮಹಿಳಾ ದೌರ್ಜನ್ಯಗಳು ರಾಜಸ್ಥಾನದಲ್ಲಿ ಶೇ. ೪೬.೩ರಷ್ಟು ಇದ್ದರೆ ಮಧ್ಯಪ್ರದೇಶದಲ್ಲಿ ಶೇ. ೪೫.೮ರಷ್ಟು ಇದೆ. ತ್ರಿಪುರದಲ್ಲಿ ಶೇ. ೪೪.೧ರಷ್ಟು ಕೌಟುಂಬಿಕ ಹಿಂಸೆಯ ಪ್ರಕರಣಗಳಾಗಿವೆ. ಮಣಿಪುರದಲ್ಲಿ ಶೇ. ೪೩.೯ರಷ್ಟು ಇದೆ. ಉತ್ತರಪ್ರದೇಶದಲ್ಲಿ ಶೇ. ೪೨.೩ರಷ್ಟು ಇದ್ದರೆ ತಮಿಳುನಾಡಿನಲ್ಲಿ ಶೇ. ೪೧.೯ರಷ್ಟು ಕಂಡುಬಂದಿದೆ. ಪಶ್ಚಿಮ ಬಂಗಾಳದಲ್ಲಿ ಶೇ. ೪೦.೩ರಷ್ಟಿದ್ದರೆ ಅರುಣಾಚಲ ಪ್ರದೇಶದಲ್ಲಿ ಶೇ. ೩೮.೮ರಷ್ಟು ಆಗಿದೆ. ಮಹಾನಗರ ಪೈಕಿ ದಿಲ್ಲಿಯ ಶೇ. ೧೬.೩ರಷ್ಟು ಮುಂಬೈ ಶೇ. ೧೯.೫ರಷ್ಟು ಚೆನ್ನೈ ಶೇ. ೪೦.೬ರಷ್ಟು ಮತ್ತು ಕೊಲ್ಕತ್ತ ಶೇ. ೨೬.೭ರಷ್ಟು ಆಗಿದೆ. ಗೋವಾದಲ್ಲಿ ಶೇ. ೧೭ರಷ್ಟು ಇದೆ. ಅದರಲ್ಲಿ ಗ್ರಾಮೀಣ ಪ್ರದೇಶದಲ್ಲಿ ಶೇ. ೧೭.೨ರಷ್ಟು ನಗರ ಪ್ರದೇಶದಲ್ಲಿ ಶೇ. ೧೬.೪ರಷ್ಟು ಆಗಿದೆ" (The common wealth ministers reference book, 1993/1994;P.360).

ರಾಷ್ಟ್ರೀಯ ಮಹಿಳೆಯ ಆಯೋಗ ೧೯೯೯ರ ಸಮೀಕ್ಷೆಯ ವರದಿ ಪ್ರಕಾರ

- "ವರದಕ್ಷಿಣೆ ಸಾವು – ೨೩೨
- ಕೊಲೆ – ೬೯
- ದೌರ್ಜನ್ಯ – ೫೯೧
- ಆಸ್ತಿಯ ಜಗಳ – ೧೩೨
- ಗಂಡ ಬಿಟ್ಟವರು – ೬೬

ಈ ಸಮೀಕ್ಷೆಯು ಮಹಿಳೆಯರ ಮೇಲೆ ಹೆಚ್ಚುತ್ತಿರುವ ದೌರ್ಜನ್ಯಗಳನ್ನು ಸೂಚಿಸುತ್ತದೆ. ಅಪರಾಧಗಳನ್ನು ಕಡಿಮೆ ಮಾಡಲು ಅತ್ಯಂತ ನಿಯಮಿತವಾದ ಬದಲಾವಣೆಯ ಅಗತ್ಯವಾಗಿದೆ. ಭಾರತೀಯ ದಂಡ ಸಂಹಿತೆಯ ಅಡಿಯಲ್ಲಿ ಭಾರತದಲ್ಲಿ ಪ್ರತಿವರ್ಷ ದಾಖಲಾಗುತ್ತಿರುವ ಪ್ರಕರಣಗಳು:

- ಹಿಂಸೆಯ ಪ್ರಕರಣ (ಗಂಡನಿಂದ ಅಥವಾ ಸಂಬಂಧಿಕರಿಂದ ಕ್ರೌರ್ಯ) – ೩೧,೦೦೦
- ವರದಕ್ಷಿಣೆಯ ಕಾರಣದಿಂದ ಸಾಯಿಸುವ ಪ್ರಕರಣಗಳು – ೫,೦೦೦
- ವರದಕ್ಷಿಣೆಯ ದೌರ್ಜನ್ಯದ ಪ್ರಕರಣಗಳು – ೨೮,೦೦೦

ವರದಕ್ಷಿಣೆ ದೌರ್ಜನ್ಯದ ಪ್ರಕರಣಗಳು ೨೦೦೩-೨೦೦೪ರಲ್ಲಿ ೧೯ ರಿಂದ ೩೮ಕ್ಕೆ ಏರಿಕೆ ಆಗಿದೆ. ಇದು ವರದಕ್ಷಿಣೆಯಿಂದಾಗಿ ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯದ ಹೆಚ್ಚಳವನ್ನು ತೋರಿಸುತ್ತದೆ. ೧೯೮೦ಕ್ಕಿಂತ ೧೯೯೪ರಲ್ಲಿ ಶೇ ೧೬೪ ಪ್ರಕರಣಗಳು ದಾಖಲಾಗಿವೆ. ರಾಷ್ಟ್ರೀಯ ಅಪರಾಧ ದಾಖಲಾತಿಯ ಬ್ಯೂರೋ ೧೯೯೮ರಲ್ಲಿ ೨೦೧೦ರ ಜನಸಂಖ್ಯೆ ಹೆಚ್ಚಳದ ಪ್ರಮಾಣಕ್ಕಿಂತ ಮಹಿಳೆಯರ ಮೇಲೆ ನಡೆಯುತ್ತಿರುವ ದೌರ್ಜನ್ಯದ ಪ್ರಮಾಣ ಹೆಚ್ಚಿದೆ ಎಂದು ದಾಖಲಿಸಿದೆ" (Gender and Law:2005;P.28-29).

**ಕೌಟುಂಬಕ ಹಿಂಸೆಯ ಮೂಲಗಳು**

ವಿವಾಹ ಸಮಯದಲ್ಲಿ ವರನ ಕಡೆಯವರು ವಧುವಿನ ಕಡೆಯವರಿಗೆ ನೀಡುತ್ತಿದ್ದ ವಧುದಕ್ಷಿಣೆ ಪದ್ಧತಿ ವರದಕ್ಷಿಣೆಯಾಗಿ ಪಲ್ಲಟವಾಗಿ ವಿವಾಹವಾಗುವುದಕ್ಕಾಗಿ ಆಕೆಯ ಪೋಷಕರು ಗಂಡನಿಗೆ ನೀಡುವ ನಗದು ಹಣ ಅಥವಾ ವಸ್ತುಗಳನ್ನು ವರದಕ್ಷಿಣೆ ಎಂದು ಕರೆಯಲಾಗುತ್ತದೆ. ಈ ವರದಕ್ಷಿಣೆ ಸಂಬಂಧಿ ವ್ಯವಹಾರಗಳು ವಿವಾಹ ಪೂರ್ವದಲ್ಲಿ ಆರಂಭವಾಗಿ ವಿವಾಹ ನಂತರವೂ ಮುಂದುವರೆಯುತ್ತವೆ. ಪ್ರಸ್ತುತ ವರದಕ್ಷಿಣೆಯು ಸುಲಭ ಹಣಗಳಿಕೆಯ ಸಾಧನವಾಗಿದೆ. ಒಂದೆಡೆ ನಗದು ಹಣ ಮತ್ತೊಂದೆಡೆ ವಾಹನ, ವಸ್ತ್ರ, ಒಡವೆ, ಮನೆ, ವಿದೇಶಿ ಪ್ರಯಾಣ, ವಿವಿಧ ಬಗೆಯ ಗೃಹಾಲಂಕಾರ ಹಾಗೂ ಗೃಹೋಪಯೋಗಿ ವಸ್ತುಗಳು ಹೀಗೆ

ಆಳಿಯನ ಬೇಡಿಕೆಗಳ ಪಟ್ಟಿ ಬೆಳೆಯುತ್ತಾ ಹೋಗುತ್ತದೆ. ಪ್ರತಿಭಾರಿಯೂ ಗಂಡನ ಬೇಡಿಕೆಗಳನ್ನು ಹೊತ್ತು ತವರು ಮನೆಗೆ ಬರುವ ಮಗಳ ಬದುಕು ಹಸನಾಗಲೆಂದು ಅನೇಕ ಪೋಷಕರು ತಮ್ಮ ಸಂಪನ್ಮೂಲಗಳನ್ನೆಲ್ಲಾ ಒಂದೊಂದಾಗಿ ಒತ್ತೆಯಿಟ್ಟು ಈ ಬೇಡಿಕೆಗಳನ್ನು ಪೂರೈಸುತ್ತಾ ಹೋಗುತ್ತಾರೆ. ತಾವು ಬೇಡಿದ ವಸ್ತುಗಳನ್ನು ಅಥವಾ ನಗದು ಹಣವನ್ನು ತನ್ನ ಪೋಷಕರ ಮನೆಯಿಂದ ತರದೆ ಹೋದರೆ ಮನೆಯೊಳಗೆ ಮತ್ತೆ ಸೇರಿಸುವುದಿಲ್ಲವೆಂಬ ಬೆದರಿಕೆಯನ್ನು ಬೇರೆ ಹಾಕಿರುತ್ತಾರೆ. ಈ ಬಗೆಯ ಕೇಸುಗಳೇ ಪತ್ರಿಕೆಗಳಲ್ಲಿ, ಪೋಲೀಸ್ ಸ್ಟೇಷನ್‌ನಲ್ಲಿ, ಕೋರ್ಟಿನಲ್ಲಿ ದಾಖಲಾಗಿವೆ. ಕೌಟುಂಬಿಕ ಹಿಂಸೆಗೆ ವರದಕ್ಷಿಣೆ ಕಾರಣವಾದರೆ ಅದನ್ನು ವರದಕ್ಷಿಣೆ ಸಂಬಂಧಿ ಹಿಂಸೆ ಎಂದು ಕರೆಯುತ್ತೇವೆ. ಇತರ ಕಾರಣಗಳಾಗಿದ್ದರೆ ಪ್ರಕರಣಗಳನ್ನು ಕೌಟುಂಬಿಕ ಹಿಂಸೆ ಎಂದು ಗುರುತಿಸುತ್ತದೆ.

**ಕೌಟುಂಬಿಕ ಹಿಂಸೆ ಸ್ವರೂಪ**

ಗಂಡನು ಅನೇಕ ಕಾರಣಗಳ ಹಿನ್ನೆಲೆಯಿಂದ ಕುಟುಂಬದ ಮಹಿಳೆಯ ಮೇಲೆ ದೈಹಿಕವಾಗಿ ಹಿಂಸಿಸುವುದು ಕೌಟುಂಬಿಕ ಹಿಂಸೆ ಆಗುತ್ತಿದೆ. ಅದರಲ್ಲಿ ಹೊಡೆಯುವುದು, ಸುಡುವುದು, ಒದೆಯುವುದು, ಗೃಹ ಬಂಧನದಲ್ಲಿರಿಸುವುದು, ನೀರು ಆಹಾರ ಕೊಡದಿರುವುದು, ಶೌಚಾಲಯ ಅಥವಾ ಮಲಗುವ ಕೋಣೆಗೆ ಬೀಗ ಹಾಕುವುದು, ಬಲತ್ಕಾರವಾಗಿ ಗರ್ಭಪಾತ ಮಾಡುವುದು ಸೇರಿರುತ್ತದೆ. ಹಾಗೆಯೇ ಲೈಂಗಿಕ ದೌರ್ಜನ್ಯವೆಸಗುವುದನ್ನು ದೈಹಿಕ ಹಿಂಸೆ ವ್ಯಾಪ್ತಿಯಲ್ಲಿ ಸೇರುತ್ತದೆ. ಅದರಲ್ಲಿ ಬಲತ್ಕಾರ, ವೈವಾಹಿಕ ಬಲತ್ಕಾರ ಆಕೆಯನ್ನು ಹೀನಾಯವಾಗಿ ಕಾಣುವುದು, ವಿವಸ್ತ್ರಗೊಳಿಸುವುದು, ಲೈಂಗಿಕ ಬೈಗುಳ, ಅವಳ ಇಷ್ಟಪಡದ ವರ್ತನೆ, ಚುಡಾಯಿಸುವುದು ಸಹ ಸೇರಿರುತ್ತದೆ. ಮಹಿಳೆಯರ ಮೇಲೆ ದೈಹಿಕ ಹಿಂಸೆಯ ಜೊತೆ ಮಾನಸಿಕ ಹಿಂಸೆಗಳನ್ನು ಕೌಟುಂಬಿಕ ಹಿಂಸೆ ಎಂದು ಪರಿಗಣಿಸಿದೆ. ಮಾನಸಿಕ ಹಿಂಸೆ ಒಳಗೊಂಡ ಸಂಗತಿಗಳೆಂದರೆ ಮಕ್ಕಳನ್ನು ತಾಯಿಯಿಂದ ಬೇರ್ಪಡಿಸುವುದು, ಹೀಯಾಳಿಸುವುದು, ಆಕೆಯನ್ನು ಮತ್ತು ಆಕೆಯ ಅಸಾಮರ್ಥ್ಯಗಳನ್ನು ಲೇವಡಿ ಮಾಡುವುದು, ಹೆಣ್ಣು ಮಗುವಿಗೆ ಜನ್ಮ ನೀಡಿದರೆ ಹೀಯಾಳಿಸುವುದು, ಮಕ್ಕಳಿಲ್ಲದಿರುವುದಕ್ಕಾಗಿ ಮೂದಲಿಸುವುದು ಇತ್ಯಾದಿ ಸೇರಿವೆ. ಒಟ್ಟಿನಲ್ಲಿ ಕುಟುಂಬದಲ್ಲಿ ಒಂದಲ್ಲ ಒಂದು ಕಾರಣಕ್ಕೆ ಈ ಸ್ವರೂಪದಲ್ಲಿ ಮಹಿಳೆಯ ಮೇಲೆ ಹಿಂಸೆಗಳು ಆಗುತ್ತದೆ. ಇವುಗಳನ್ನು ಕೌಟುಂಬಿಕ ಹಿಂಸೆಗಳೆಂದು ಕರೆಯುತ್ತಾರೆ.

ಪೋಲೀಸ್ ಸ್ಟೇಷನನಲ್ಲಿ ದಾಖಲಾದ ಪ್ರಕರಣ ಕೋರ್ಟಿನಲ್ಲಿ ದಾಖಲಾದ ಪ್ರಕರಣ ದಾಖಲಾಗದ ಪ್ರಕರಣ ಮತ್ತು ಪತ್ರಿಕೆ ವರದಿಗಳನ್ನು ಗಮನಿಸಿದಾಗ ಕೌಟುಂಬಿಕ ಹಿಂಸೆಗೊಳಗಾದ ಮಹಿಳೆಯ ತೊಂದರೆಗಳನ್ನು ಆಕೆಯ ತಂದೆ ತಾಯಿಗಳು ಕೇಸಾಗಿ ದಾಖಲಿಸುವಾಗ ವರದಕ್ಷಿಣೆ

ವ್ಯಾಪ್ತಿಯಲ್ಲಿ ದಾಖಲಿಸುತ್ತಾರೆ ಮತ್ತು ಪತ್ರಿಕೆಗಳು ಸಹ ಅದನ್ನೇ ವರದಿ ಮಾಡಿವೆ. ಆದರೆ ಪ್ರಕರಣಗಳು ಕ್ಷೇತ್ರಕಾರ್ಯದಿಂದ ಮಾಹಿತಿಯಿಂದ ಮತ್ತು ಪತ್ರಿಕೆ ವರದಿಗಳ ವಿವರಗಳನ್ನು ಸೂಕ್ಷ್ಮವಾಗಿ ಗಮನಿಸಿದಾಗ ಮಹಿಳೆಯ ಕೌಟುಂಬಿಕ ಹಿಂಸೆಗೆ ವರದಕ್ಷಿಣೆಯೇ ಮುಖ್ಯ ಕಾರಣವಲ್ಲ. ಆದರೆ ಅದು ಒಂದು ರಾಜಕಾರಣವಾಗಿರುವ ಸಾಧ್ಯತೆ ಇರುವ ಸಂಗತಿ ಗೋಚರವಾಗುತ್ತದೆ. ಆದರೆ ಹುಡುಗಿಯ ತಂದೆ ತಾಯಿಗಳು ಅಥವಾ ಆಕೆಯ ಸಂಬಂಧಿಕರು ತಮ್ಮ ಹಿತಾಸಕ್ತಿಗಳಿಗಾಗಿ ಮೂಲಕಾರಣಗಳನ್ನು ಪಕ್ಕಕ್ಕೆ ಸರಿಸಿ ವರದಕ್ಷಿಣೆ ಕಾರಣ ನೀಡಿ ದೂರು ದಾಖಲಿಸುತ್ತಾರೆ. ವಿವಾಹದ ಸಂದರ್ಭದಲ್ಲಿ ಹಾಗೂ ವಿವಾಹವಾದ ನಂತರದಲ್ಲಿ ಮಗಳಿಗೆಂದು ಅಳಿಯನಿಗೆಂದು ತಾವು ನೀಡಿದ ಹಣವನ್ನು ಹಿಂದಿರುಗಿ ಪಡೆಯುವ ಉದ್ದೇಶವೇ ಹೆಣ್ಣಿನ ತಂದೆತಾಯಿಯರಿಗೆ, ಅಣ್ಣ ತಮ್ಮಂದಿರಿಗೆ ಪ್ರಮುಖವಾಗುತ್ತದೆ. ಹಾಗಂತ ಕೌಟುಂಬಿಕ ಹಿಂಸೆಗೆ ಸಂಬಂಧಿಸಿದ ಕಾನೂನಿಗೆ ಬೆಲೆಯಿಲ್ಲ ಎಂದರ್ಥವಲ್ಲ. ಇದರಿಂದ ಹಿಂಸೆಗೊಳಗಾದ ಮಹಿಳೆಯನ್ನು ನಿಯಂತ್ರಿಸುವ ಮನೆಯವರಿಗೆ ಆರ್ಥಿಕ ಲಾಭಗಳು ಪಡೆಯುವ ಅವಕಾಶವನ್ನು ಈ ಕಾನೂನು ತಡೆಯೊಡ್ಡುತ್ತದೆ. ಈ ಆರ್ಥಿಕ ಲಾಭಗಳಿಗಾಗಿ ಆಸಕ್ತಿ ಇಟ್ಟ ಮಹಿಳೆಯರು/ತಂದೆತಾಯಿಗಳು ವರದಕ್ಷಿಣೆ ಕಾನೂನಡಿಯಲ್ಲಿ ಕೇಸು ದಾಖಲಿಸುತ್ತಾರೆ. ಪ್ರಸ್ತುತ ಅಧ್ಯಯನದಲ್ಲಿ ಅನೇಕ ಪ್ರಕರಣಗಳನ್ನು ಅಧ್ಯಯನಕ್ಕೊಳಪಡಿಸಲಾಗಿದೆ.

ಪ್ರಜಾವಾಣಿ ಪತ್ರಿಕೆಯಲ್ಲಿ "ವರದಕ್ಷಿಣೆ ಹಿಂಸೆಗಾಗಿ ಮುಕ್ತಿ. ವಿ. ವಿ. ರೀಡರ್ ಬಂಧನ" ಎಂಬ ಶೀರ್ಷಿಕೆಯಲ್ಲಿ ೨೩-೦೫-೨೦೦೭ರಂದು ವರದಿ ಪ್ರಕಟವಾಗಿದೆ. ಇದರ ಪ್ರಕಾರ ಮದುವೆಯ ಸಮಯದಲ್ಲಿ ಒಂದು ಲಕ್ಷ ರೂಪಾಯಿ ನಗದು, ಚಿನ್ನಾಭರಣಗಳನ್ನು ವರದಕ್ಷಿಣೆಯಾಗಿ ನೀಡಲಾಗಿತ್ತು. ವೆಂಕಟೇಶ ಮದುವೆಯ ನಂತರವೂ ತವರು ಮನೆಯಿಂದ ಮತ್ತಷ್ಟು ವರದಕ್ಷಿಣೆ ತರುವಂತೆ ಸುಧಾಳಿಗೆ ದೈಹಿಕ ಹಿಂಸೆ ನೀಡುತ್ತಿದ್ದರು. ಹಲವು ಕಾರಣಗಳಿಗಾಗಿ ಗಂಡ-ಹೆಂಡತಿ ನಡುವೆಯೂ ಆಗಾಗ ಜಗಳ ನಡೆಯುತ್ತಿದ್ದು ಇತ್ತೀಚೆಗೆ ಹೊಸ ಮನೆಯ ಕಟ್ಟಿಸಿದ್ದೆವು. ಅದಕ್ಕೆ ಸಾಲ ಮಾಡಿದೆವು ಸಾಲ ತೀರಿಸಲು ಸಂಬಳದ ಹಣ ನೀಡುವಂತೆ ಒತ್ತಾಯಿಸುತ್ತಿದ್ದ ಡಾ.ಸುಧಾಗೆ ದೈಹಿಕ ಹಿಂಸೆಯನ್ನು ನೀಡುವುದರ ಜೊತೆಗೆ ಕೆಲವು ಖಾಲಿ ಚೆಕ್‌ಗಳಿಗೆ ಬಲವಂತವಾಗಿ ಸಹಿ ಪಡೆದುಕೊಂಡಿದ್ದರು ಎಂದು ಡಾ. ಸುಧಾ ದೂರು ದಾಖಲಿಸಿದ್ದಾರೆ. ಸುಧಾ ದಂಪತಿಗೆ ಇಬ್ಬರು ಹೆಣ್ಣು ಮಕ್ಕಳಿದ್ದಾರೆ. ಗಂಡು ಮಗು ಆಗಲಿಲ್ಲ ಎಂಬ ಕಾರಣದಿಂದ ಹೆಚ್ಚಿನ ಹಿಂಸೆ ನೀಡುತ್ತಿದ್ದರು ಎಂದು ಸುಧಾ ದೂರಿದ್ದಾರೆ. ಈ ವರದಿಯಲ್ಲಿ ಸುಧಾ ಹಿಂಸೆಗೆ ಮೂಲ ಆದಾಯ ತರುವ ವೃತ್ತಿ ಮಾಡುತ್ತಿದ್ದಾಳೆ. ಕುಟುಂಬದ ಪ್ರತಿಯೊಂದು ಕಾರ್ಯ ಗಂಡನ ಒಪ್ಪಿಗೆ ನಿಯಂತ್ರಣದಲ್ಲಿ ನಡೆಯುವುದರಿಂದ ಅವಳ ಆದಾಯ ಕುಟುಂಬಕ್ಕೆ ಸೇರಬೇಕೆಂದು ಬಯಸುತ್ತಾನೆ. ಆದರೆ ಕುಟುಂಬದಲ್ಲಿ ಪುರುಷನ ಅಧಿಕಾರ ಅಧಿಕವಾಗಿದೆ. ಇದು

ವೆಣ್ಣಿನ ಸಂಪತ್ತನ್ನು ಹೊಂದುವುದಕ್ಕೆ ನಿರ್ವಹಿಸುವುದಕ್ಕೆ ಇಷ್ಟಪಡುವುದಿಲ್ಲ ಎಂಬುದು ಮನೋಭಾವ ಸ್ಪಷ್ಟವಾಗುತ್ತದೆ. ಗಂಡುಮಗುವನ್ನು ಹೆರಲಿಲ್ಲ ಎಂಬುದು ಕೂಡ ಸುಧಾ ಅವರ ಮೇಲೆ ನಡೆಯುವ ಹಿಂಸೆಗೆ ಕಾರಣವಾಗಿದ್ದನ್ನು ಗಮನಿಸಬೇಕು.

ಹಾಯ್ ಬೆಂಗಳೂರು ಪತ್ರಿಕೆಯಲ್ಲಿ "ಯಾರೂ ಸಿಗದಿದ್ರೆ ಹೆಂಡತಿಗೇ ಒದೆ ಕೊಡುತ್ತಾನೆ" ಎಂಬ ಶೀರ್ಷಿಕೆಯಲ್ಲಿ ೨೫-೨೦೦೭ರಂದು ವರದಿ ಮಾಡಲಾಗಿದೆ. ಇದರ ಪ್ರಕಾರ ದೊಡ್ಡ ಬಳ್ಳಾಪುರದ ಮರಳೇನ ಹಳ್ಳಿಯ ನಾರಾಯಣಸ್ವಾಮಿ ಮಗ ಇನ್ಸ್‌ಪೆಕ್ಟರ್ ಶ್ರೀನಿಧಿಯ ಜೊತೆ ಜ್ಯೋತಿಶ್ರೀಯ ವಿವಾಹವಾಗಿತ್ತು. ಮೊದಲು ವರದಕ್ಷಿಣೆಯೇ ಬೇಡ ಅಂದಿದ್ದ ಶ್ರೀನಿಧಿ ಆ ಮೇಲೆ ಸಾಕಷ್ಟು ಬಂಗಾರ ಹಾಕುವಂತೆ ಕೇಳಿದನು. ಬೆಂಗಳೂರಿನ ಬಂಟ್ಸ್ ಸಂಘದ ಛತ್ರದಲ್ಲಿ ಅದ್ದೂರಿಯ ಮದುವೆ ಮಾಡಿಸಿಕೊಂಡನು. ಅಂದರೆ ೧೯೯೮ರ ಜೂನ್ ತಿಂಗಳಲ್ಲೇ ಹನ್ನೆರಡು ಲಕ್ಷ ಖರ್ಚು ಮಾಡಿ ಮದುವೆ ಮಾಡಿಕೊಟ್ಟಿದ್ದರು. ಅವತ್ತೇ ಶ್ರೀನಿಧಿ ಬೆಳ್ಳಿ ತಟ್ಟೆಯಲ್ಲಿ ನನ್ನ ಕಾಲು ತೊಳೆಯಲಿಲ್ಲ ಅಂತ ರಗಳೆ ತೆಗೆದಿದ್ದ ಶ್ರೀನಿಧಿ ತನ್ನ ಶರ್ಟಿನ ಭುಜಕ್ಕೆ ಸ್ಟಾರ್ ಹಾಕಿಲ್ಲ. ಬೂಟ್ ಪಾಲಿಷ್ ಮಾಡಿಲ್ಲ ಲೇಸು ಕಟ್ಟಲಿಲ್ಲ ಅಂತ ಜಗಳ ತೆಗೆದು ಈ ಕಾರಣಕ್ಕಾಗಿ ಹೆಂಡತಿ ಜ್ಯೋತಿಶ್ರೀಯನ್ನು ಬಾಯಿಗೆ ಸಿಕ್ಕಂತೆ ಬೈದಿದ್ದಾನೆ. ನಿನ್ನ ಹೆಂಡತಿಯದು ಜಾಸ್ತಿಯಾಯ್ತು ಅಂತ ಶ್ರೀನಿಧಿಯ ತಾಯಿ ಜಯಲಕ್ಷ್ಮಮ್ಮ ಮತ್ತು ಅಣ್ಣ ಶ್ರೀನಿವಾಸ ಸಹ ಶ್ರೀನಿಧಿಗೆ ಹುರಿಗೊಳಿಸಿದ್ದಾರೆ. ಸಿಕ್ಕಾಪಟ್ಟೆ ಸಿಟ್ಟಿಗೆದ್ದ ಶ್ರೀನಿಧಿ ಹೆಂಡತಿಯು ಕಣ್ಣು, ಕೆನ್ನೆ, ಭುಜ, ತಲೆ ಹೀಗೆ ಸಿಕ್ಕ ಕಡೆಗೆ ಬಡಿದಿದ್ದಾನೆ. ತಾಳಿ ಕಿತ್ತುಕೊಂಡಿದ್ದಾನೆ. ಕಾಲುಂಗುರ ಕಿತ್ತುಕೊಂಡಿದ್ದಾನೆ. ಎಚ್ಚರ ತಪ್ಪಿ ಬಿದ್ದ ಜ್ಯೋತಿಶ್ರೀಗೆ ಚಿಕಿತ್ಸೆಯನ್ನು ನೀಡದೆ ಹೋಗಿದ್ದಾನೆ. ವಿಜಯನಗರ ಪೋಲೀಸರಿಗೆ ವರದಕ್ಷಿಣೆ ಕಿರುಕುಳ ಕೇಸು ಹಾಕಿದ್ದಾರೆ. ಈ ಪ್ರಕರಣವು ಸಮಾಜ ಮತ್ತು ಸಾಂಸ್ಕೃತಿಕ ಮೌಲ್ಯ ದಬ್ಬಾಳಿಕೆಯ ಪ್ರತೀಕವಾಗಿದೆ. ಪುರುಷನಿಷ್ಠ ಮೌಲ್ಯಗಳನ್ನು ಸಾಮಾಜೀಕರಣಗೊಳಿಸುವ ಮಾಧ್ಯಮವಾದ ಸಾಮಾಜಿಕ ಸಂಸ್ಥೆಗಳು ಆಧುನಿಕ ಮಾಧ್ಯಮಗಳ ಪ್ರಭಾವವು ಮಹಿಳೆಯ ಹಿಂಸೆಗೆ ಕಾರಣವಾಗಿವೆ. ಆದ್ದರಿಂದ ವರದಕ್ಷಿಣೆ ಕುರಿತು ಅಧ್ಯಯನ ಮಾಡುವಾಗ ಇಂತಹ ಕುಟುಂಬದ ಸಮಸ್ಯೆಯ ಬಗೆಗೆ ಗಂಭೀರವಾಗಿ ಯೋಚಿಸುವಂಥ ಅಗತ್ಯತೆ ಇದೆ.

ಕಲ್ಪನಾ ಪ್ರಕರಣದಲ್ಲಿ ಕಂಡು ಬರುವ ಸಂಗತಿಗಳೆಂದರೆ, ಕಲ್ಪನಾ ಮದುವೆಯನ್ನು ಸಂಬಂಧಿಕರಲ್ಲಿ ಮಾಡಿಕೊಟ್ಟಿದ್ದು ಮದುವೆಯಾಗಿ ೧ ತಿಂಗಳಲ್ಲೇ ಗಂಡ ಪೀಡಿಸಲು ಪ್ರಾರಂಭಿಸಿದನು. ಅವಳ ವಿದ್ಯಾಭ್ಯಾಸಕ್ಕೆ ತೊಂದರೆ ಕೊಟ್ಟನು. ದಿನಂಪ್ರತಿ ಅವಳ ಶೀಲದ ಮೇಲೆ ಸಂಶಯ ಪಡುವುದು ಮತ್ತು ಅಶ್ಲೀಲ ಮಾತುಗಳು ಅಲ್ಲದೆ ಮದುವೆಯಲ್ಲಿ ೧೧ ತೊಲೆ ಬಂಗಾರವನ್ನು ತಮ್ಮ ತಂದೆ ಮನೆಯಿಂದ ತರುವಂತೆ ಒತ್ತಾಯಿಸುತ್ತಿದ್ದ. ಈ ಕಾರಣಕ್ಕಾಗಿ ದೈಹಿಕ

ಹಿಂಸೆ ನೀಡುತ್ತಿದ್ದನು. ಹೊಡೆಯುವುದು, ಸಿಗರೇಟನಿಂದ ಸುಡುತ್ತಿದ್ದ, ಆಗಲೂ ಸುಮ್ಮನಿದ್ದೆ. ನನ್ನಿಂದ ವಿವಾಹ ವಿಚ್ಛೇದನ ಪಡೆದು ಇನ್ನೊಂದು ವಿವಾಹ ಮಾಡಿಕೊಳ್ಳುವುದು ಅವನ ಉದ್ದೇಶವಾಗಿತ್ತು. ಅವನು ಮೊದಲು ಒಂದು ಹುಡುಗಿಯನ್ನು ಪ್ರೀತಿಸುತ್ತಿದ್ದೆ ಎಂದು ಪದೇ ಪದೇ ಹೇಳುತ್ತಿದ್ದ. ನೀನು ಅವಳಂತೆ ಸುಂದರವಾಗಿಲ್ಲ ಎಂದು ದೈಹಿಕ ಹಿಂಸೆ ನೀಡಿ ನಮ್ಮ ತವರು ಮನೆಗೆ ಕಳಿಸುತ್ತಿದ್ದನು. ಇದರಿಂದ ಬೇಸತ್ತಾ ಕಲ್ಪನಾ ವಿವಾಹ ವಿಚ್ಛೇದನಕ್ಕೆ ಬಂದಿದ್ದಾಳೆ.

ರೂಪಾಳ ಪ್ರಕರಣದಲ್ಲಿ ಕಂಡುಬರುವ ಸಂಗತಿಗಳೆಂದರೆ ರೂಪಳನ್ನು ಮದುವೆಯಲ್ಲಿ ವರದಕ್ಷಿಣೆ ಮತ್ತು ಪರೋಪಕಾರ ಮಾಡಿದ್ದರು. ಆದರೆ ನಿಂಗಪ್ಪ ಹೇಳುವುದು ನಾನು ದೈಹಿಕ ಹಿಂಸೆ ನೀಡಿದ್ದು ಹಣಕ್ಕಾಗಿ ಅಲ್ಲ ಆಕೆ ನನ್ನ ಮಾತು ಕೇಳುತ್ತಿರಲಿಲ್ಲ ನನಗೆ ತಿಳಿಸದೆ ಎಲ್ಲಿಗೆ ಹೋಗಿ ಬರುತ್ತಿದ್ದಳು ಆದರೂ ನಾನು ಸುಮ್ಮನೇ ಇದ್ದೇ ಆದರೆ ಕೆಲವೊಂದು ಸಲ ಮನೆಗೆ ಬೇಕಾದಾಗ ಅವಳನ್ನು ಹಣ ಕೇಳಿದ್ದೇ ಅದಕ್ಕೆ ಸೀಮೆಎಣ್ಣೆ ಸುರಿದುಕೊಂಡು ಸತ್ತಳು. ಇದರಿಂದ ನನ್ನ ಮೇಲೆ ವರದಕ್ಷಿಣೆ ಹಣಕ್ಕಾಗಿ ಸಾಯಿಸಿದ ಎಂದು ಪ್ರಕರಣ ದಾಖಲೂ ಮಾಡಿದ್ದಾರೆ ಎಂದು ತಿಳಿಸಿದ್ದಾನೆ.

ಈ ಎಲ್ಲ ಪ್ರಕರಣಗಳನ್ನು ನೋಡಿದಾಗ ಮಹಿಳೆಯರು ಅಥವಾ ಆಕೆಯ ತಂದೆ ತಾಯಿಗಳು ತನ್ನ ಮಗಳ ಸಮಸ್ಯೆಗಳ ಸ್ವರೂಪವನ್ನು ಆಧರಿಸಿ ಕೇಸ್ ದಾಖಲೆ ಮಾಡಬೇಕಾಗಿರುವುದು, ಒಂದು ಕಡೆ ಆದರೆ ಮತ್ತೊಂದು ಕಡೆ ಈ ಕೇಸ್ ದಾಖಲೆ ಮಾಡುವ ಅಧಿಕಾರಿಗಳು, ದಾಖಲಾಗುವ ಕೇಸಿನ ಸಂಬಂಧಪಟ್ಟ ಮಾಹಿತಿಯನ್ನು ಸರಿಯಾಗಿ ಸಂಗ್ರಹಿಸಿ ವಿಶ್ಲೇಷಿಸಿ ಆ ಕೇಸು ಯಾವ ಕಾನೂನಿನ ವ್ಯಾಪ್ತಿಗೆ ಒಳಪಡುತ್ತದೆ ಎಂಬ ಸಾಮಾಜಿಕ ತಿಳುವಳಿಕೆ ನೀಡುವ ಅಗತ್ಯತೆ ಇದೆ.

"ಕೌಟುಂಬಿಕ ಹಿಂಸೆಯಂಥ ಒಂದು ಜ್ವಲಂತ ಸಮಸ್ಯೆಯನ್ನು ಪರಿಹರಿಸಬೇಕೆಂಬ ದೃಷ್ಟಿಯಿಂದ, ಭಾರತ ಸರಕಾರ ಕೌಟುಂಬಿಕ ಹಿಂಸೆಯಿಂದ ರಕ್ಷಣೆ ವಿಧೇಯಕ ೨೦೦೧ನ್ನು ಸಂಸತ್ತಿನಲ್ಲಿ ಕಳೆದ ಡಿಸೆಂಬರ್ ೧೩ರಂದು ಮಂಡಿಸಲು ಉದ್ದೇಶಿಸಿತ್ತು. ಬಹುಕಾಲದಿಂದ ನಿರೀಕ್ಷಿಸಿದ್ದ ಈ ವಿಧೇಯಕ ಯಾವುದೋ ಕಾರಣದಿಂದ ಆಗಲಿ ಮಂಡನೆಯಾಗದೆ ಇದ್ದುದು ಒಳ್ಳೆಯದೇ ಆಯಿತು ಎಂಬುದು ಅನೇಕ ಮಹಿಳಾ ಕಾನೂನೇತ್ತರ ಹಾಗೂ ಮಹಿಳಾ ಪರ ಹೋರಾಟ ನಡೆಸುತ್ತಿರುವ ಸಂಘ ಸಂಸ್ಥೆಗಳು ಅಭಿಪ್ರಾಯವಾಗಿತ್ತು. ಇದಕ್ಕೆ ಕಾರಣ ಇದು ಮಹಿಳೆಯರ ಸಮಸ್ಯೆಗೆ ಪೂರ್ಣ ಪ್ರಮಾಣದ ಗಮನ ನೀಡಿರಲಿಲ್ಲ ಎಂಬುದು. ಆದರೆ ನಂತರದಿಂದ ಮೇಲ್ಕಂಡ ವಿಧೇಯಕ ಅದೇ ರೂಪದಲ್ಲಿಯೇ ಮಾರ್ಚ್ ೮ರಂದು ಸಂಸತ್ತಿನಲ್ಲಿ

ಮಂಡನೆಯಾಗಿದೆ. ಸರಕಾರವು ಸಿದ್ಧಪಡಿಸಿರುವ ಈ ವಿಧೇಯಕದ ಲೋಪದೋಷಗಳನ್ನು ಸರಿಪಡಿಸಿ ಮಹಿಳೆಯರ ಸಮಸ್ಯೆಯ ಎಲ್ಲ ಆಯಾಮಗಳನ್ನು ಗಮನಕ್ಕೆ ತೆಗೆದುಕೊಂಡು ವಿಸ್ತೃತ ಅಧ್ಯಯನ ನಡೆಸಿ 'ಲಾಯರ್ಸ್ ಕಲೆಕ್ಟಿವ್ ವಿಮೆನ್ಸ್ ರೈಟ್ಸ್ ಇನಿಷಿಯೇಟಿವ್' (ಎಲ್.ಸಿ.ಡಬ್ಲ್ಯೂ.ಆರ್.ಐ) ಎಂಬ ಮಹಿಳಾ ಹಕ್ಕುಗಳ ಹೋರಾಟ ಸಂಸ್ಥೆ ಮಹಿಳೆಯರ ವಿರುದ್ಧ ಕೌಟುಂಬಿಕ ಹಿಂಸೆ (ನಿವಾರಣಾ) ವಿಧೇಯಕ, ೨೦೦೧ನ್ನು ಸಿದ್ದಪಡಿಸಿದೆ. ಇದರ ಉದ್ದೇಶವೂ ಹೆಚ್ಚುತ್ತಿರುವ ಕೌಟುಂಬಿಕ ಹಿಂಸೆಗೆ ಸಿವಿಲ್ ಕಾನೂನಿನ ಮೂಲಕ ಪರಿಹಾರ ದೊರೆಯುವಂತೆ ಮಾಡುವುದು. ಕೌಟುಂಬಿಕ ಹಿಂಸೆಗೆ ಒಳಗಾಗಿ ನೊಂದವರಿಗೆ ರಕ್ಷಣೆ ನೀಡುವ ಆದೇಶಗಳನ್ನು ಹೊರಡಿಸಲು ನ್ಯಾಯಾಲಯಗಳಿಗೆ ಅಧಿಕಾರ ನೀಡುವುದು ಇತ್ಯಾದಿ ಒಳಗೊಂಡಿದೆ" (ಗೀತಾಕೃಷ್ಣಮೂರ್ತಿ:೨೦೦೭;ಪು.೪೭). ಈ ಮಸೂದೆಯಲ್ಲಿರುವ ಹೆಚ್ಚುವರಿ ಅಂಶಗಳೆಂದರೆ "ಹಿಂಸಾಚಾರದಲ್ಲಿ ತೊಡಗಿಸಿಕೊಳ್ಳುವ ವ್ಯಕ್ತಿ ಗಂಡ ಮಾತ್ರವಾಗಿರದೆ ಬೇರೆ ವ್ಯಕ್ತಿ ಅಥವಾ ವ್ಯಕ್ತಿಗಳು ಕೂಡ ಆಗಿರಬಹುದು. ಈ ಮಸೂದೆಯು ಕೌಟುಂಬಿಕ ಹಿಂಸಾಚಾರವನ್ನು ಪುನರ್ ನಿರ್ವಚಿಸಿಕೊಳ್ಳುತ್ತದೆ. ಹೀಗಾಗಿ ಹಿಂಸಾಚಾರದಲ್ಲಿ ಮಾನಸಿಕ ಹಾಗೂ ಭಾವನಾತ್ಮಕ ಪೀಡನೆ ಸೇರಿಕೊಳ್ಳುತ್ತದೆ. ಈ ನೆಲೆಯಲ್ಲಿ ಹೆಣ್ಣಿನ ಸ್ವತಂತ್ರ ಓಡಾಟಕ್ಕೆ ಕೂಡ ಅವಕಾಶ ನೀಡಬೇಕಾಗುತ್ತದೆ. ಉದಾಹರಣೆ – ಅವಳನ್ನು ತವರಿಗೆ ಹೋಗುವುದನ್ನು ಪ್ರತಿಬಂಧಿಸುವುದಾಗಲೀ ನೆರೆಯವರಲ್ಲಿ ಮಾತಾಡಿಕೊಳ್ಳಲು ಅವಕಾಶ ನೀಡದಿರುವುದಾಗಲೀ ಮಾಡುವಂತಿಲ್ಲ. ಗಂಡನ ಮನೆಯಿಂದ ಅವಳನ್ನು ಹೊರ ತಳ್ಳುವುದು, ಉದ್ಯೋಗ ಬಿಡುವಂತೆ ಹೆಂಡತಿಗೆ ಆದೇಶಿಸಿ ಅವಳಿಗೆ ಆಹಾರ ನೀಡದೆ ವರದಕ್ಷಿಣೆಗಾಗಿ ಪೀಡಿಸುತ್ತಿದ್ದರೆ, ಮೂಲಭೂತ ಅವಶ್ಯಕತೆಗಳನ್ನು ಪೂರೈಸದಿರುವುದು ಇನ್ನೂ ಮುಂತಾದವುಗಳನ್ನು ಒಳಗೊಂಡಿದೆ" (ಪ್ರಜಾವಾಣಿ:೩೧–೦೩–೦೨).

ಕೌಟುಂಬಿಕ ಹಿಂಸೆ ಕಾಯಿದೆ ೨೦೦೫ರ ಮರುತಿದ್ದುಪಡಿಗೆ ಒಳಗಾಗಿದೆ. ಭಾರತದ ರಾಷ್ಟ್ರಪತಿಯವರು ೨೦೦೫ರ ಸೆಪ್ಟಂಬರ್‌ನಲ್ಲಿ ಕೌಟುಂಬಿಕ ಹಿಂಸೆಯಿಂದ ಮಹಿಳೆಯರಿಗೆ ರಕ್ಷಣೆ ಅಧಿನಿಯಮಕ್ಕೆ ಅನುಮೋದನೆ ನೀಡಿದ್ದರು. ಹೀಗಾಗಿ ಇದು ೨೦೦೬ರ ಅಕ್ಟೋಬರ್ ೨೬ದಿಂದ ಜಾರಿಗೆ ಬಂದಿದೆ. ೨೦೦೫ರ ಕೌಟುಂಬಿಕ ಹಿಂಸೆ ನಿಷೇಧ ಕಾಯಿದೆಯ ಪ್ರಮುಖ ಸಂಗತಿಗಳು ಓೀಗಿವೆ. ಈ ಕಾಯಿದೆಯು ಜಮ್ಮು ಮತ್ತು ಕಾಶ್ಮೀರವನ್ನು ಹೊರತುಪಡಿಸಿ ಭಾರತ ಒಕ್ಕೂಟದ ಎಲ್ಲಾ ರಾಜ್ಯಗಳು ಮತ್ತು ಕೇಂದ್ರಾಡಳಿತ ಪ್ರದೇಶಗಳು ಈ ಕಾಯ್ದೆಯಲ್ಲಿ ಬರುತ್ತವೆ. ಈ ಕಾಯ್ದೆಯಂತೆ ಕಿರುಕುಳಕ್ಕೆ ಒಳಗಾದ ವ್ಯಕ್ತಿ ಆರಕ್ಷಕ ಅಧಿಕಾರಿ, ರಕ್ಷಣಾ ಅಧಿಕಾರಿ ಅಥವಾ ಮ್ಯಾಜಿಸ್ಟ್ರೇಟ್ ಹತ್ತಿರ ಅರ್ಜಿ ಸಲ್ಲಿಸಬಹುದಾಗಿದೆ. ಭಾರತೀಯ ದಂಡ ಸಂಹಿತೆ ಕಾಯ್ದೆಯ ೪೯೮–ಎ ಪರಿಚ್ಛೇದದ ವ್ಯಾಪ್ತಿಯ ಅಡಿಯಲ್ಲಿ ಇಂತಹ ವ್ಯಕ್ತಿ ದೂರು ಸಲ್ಲಿಸಬಹುದಾಗಿದೆ. ಕಿರುಕುಳಕ್ಕೆ ಒಳಗಾದ ವ್ಯಕ್ತಿಗೆ ಆಶ್ರಯ ಒದಗಿಸುವುದರ ಜೊತೆಗೆ ಅಗತ್ಯ ಬಿದ್ದರೆ ವೈದ್ಯಕೀಯ

ನೆರವನ್ನು ಸಹ ಈ ಕಾಯ್ದೆಯಲ್ಲಿ ನೀಡಬಹುದಾಗಿದೆ. ಈ ಕಾಯ್ದೆಯು ದೇಶದ ಲಕ್ಷಾಂತರ ಮಹಿಳೆಯರಿಗೆ ಕೌಟುಂಬಿಕ ಹಿಂಸೆ ನಿಷೇಧ ಕಾಯಿದೆಯು ಎಂಬ ಆಶಯ ಹೊಂದಿದೆ. ಕುಟುಂಬದ ಅಂದರೆ ಸುರಕ್ಷಿತವಾಗಿ ಬದುಕುವ ನೆಲೆಯಾಗಿರಬೇಕು. ಆದರೆ ಅಲ್ಲಿಯೇ ಮಹಿಳೆಯರಿಗೆ ಶೋಷಣೆ ಹೆಚ್ಚಾಗಿ ಅವಳ ಜೀವನ ಚಿಂತಾಜನಕವಾಗಿದೆ. ಇವೆಲ್ಲವುದಕ್ಕೂ ಪರಿಹಾರದ ಹೆಜ್ಜೆಯಲ್ಲಿ ಈ ಕಾಯ್ದೆ ನಿಂತಿದೆ "೨೦೦೫ರ ವಿಶ್ವ ಜನಸಂಖ್ಯೆ ನಿಧಿ ವರದಿ ಪ್ರಕಾರ ೧೫ರಿಂದ ೪೯ ವಯಸ್ಸಿನ ಒಳಗಿನ ಪ್ರತಿಶತ ೭೦ ವಿವಾಹಿತ ಮಹಿಳೆಯರು ಹೊಡೆತ ಶೋಷಣೆಗೆ ಒಳಗಾಗಿದ್ದು" (ಸ್ಪರ್ಧಾ ಚೈತ್ರ:೨೦೦೭; ಜನವರಿ) ಎಂದು ಅಭಿಪ್ರಾಯ ಪಟ್ಟಿದೆ.

ಒಟ್ಟಿನಲ್ಲಿ ಕೌಟುಂಬಿಕ ಹಿಂಸೆ ಕೇಸುಗಳನ್ನು ವರದಕ್ಷಿಣೆ ಕೇಸುಗಳನ್ನಾಗಿ ದಾಖಲಿಸುವುದರಿಂದ ಮಹಿಳೆಯ ಮೇಲಿನ ದೌರ್ಜನ್ಯಕ್ಕೆ ಪರಿಹಾರ ದೊರೆಯುವುದಿಲ್ಲ. ಬದಲಾಗಿ, ಕುಟುಂಬವನ್ನು ನಿರ್ದೇಶಿಸುವ, ನಿಯಂತ್ರಿಸುವವರ ಹಿತಾಸಕ್ತಿಯನ್ನು ಕಾಪಾಡಿದಂತೆ ಆಗುತ್ತದೆ. ಹಾಗಾಗಿ ಪಿತೃ ಪ್ರಧಾನತೆ, ಜಾತಿ ರಾಜಕಾರಣದ ಪುರುಷ ನಿಷ್ಠೆ ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಮೌಲ್ಯಗಳು ಮಹಿಳೆಯರಿಗೆ ವಿವಿಧ ಸಮಸ್ಯೆಗಳನ್ನು ಉಂಟುಮಾಡುತ್ತವೆ. ಹಾಗಾಗಿ ಕೌಟುಂಬಿಕ ಹಿಂಸೆಗೆ ಕಾರಣವಾದ ಸಾಮಾಜಿಕ ಮೌಲ್ಯಗಳನ್ನು ಎದುರಿಸಲು, ಬದಲಾಯಿಸಲು ಮತ್ತು ಲಿಂಗ ಸಮಾನತೆಗೆ ಕಾನೂನುಗಳು ಮಾತ್ರ ಇದ್ದರಷ್ಟೇ ಸಾಲದು ಈ ಕಾನೂನುಗಳನ್ನು ಜಾರಿಗೊಳಿಸಬೇಕಾದರೆ ಇಡೀ ಸಮಾಜವೇ ಕ್ರಿಯಾಶೀಲವಾಗಬೇಕಾಗುತ್ತದೆ.

**ಉಲ್ಲೇಖಗಳು:-**


೧. Edited – Martin Macleish:1993/1994; The common wealth ministers reference book, published – Kensington Publication Limited.

೨. Gender and Law:2005;Vivekananda Institute for leadership Mysore.

೩. ಗೀತಾಕೃಷ್ಣಮೂರ್ತಿ:೨೦೦೭;ಮಹಿಳೆ ಸಮಾಜ ಕಾನೂನು, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್.

೪. ಪ್ರಜಾವಾಣಿ: ೩೧-೦೩-೨೦೦೨.

೫. ಸ್ಪರ್ಧಾಚೈತ್ರ:೨೦೦೭;ಜನವರಿ.

ಮಹಿಳೆಯ ವರದಕ್ಷಿಣೆ ಸಮಸ್ಯೆಯನ್ನು ನೋಡುವ ಚಳುವಳಿಗಾರರು, ಅಧ್ಯಯನಕಾರರು, ಸಮಿತಿಗಳು ಇವರೆಲ್ಲರ ನಿರ್ಧಾರಗಳು, ಮಹಿಳೆಯರ ಎಲ್ಲಾ ಸಮಸ್ಯೆಗಳಿಗೆ ವರದಕ್ಷಿಣೆಯೇ ಕಾರಣ ಎಂಬ ಹಂತ ತಲುಪಿವೆ. ಆದರೆ ಮಹಿಳಾ ಅಧ್ಯಯನಕಾರರು ವರದಕ್ಷಿಣೆಯ ವಸ್ತುವೇ ಬೇರೆ ಎನ್ನುವ ಅನುಮಾನವನ್ನು ವ್ಯಕ್ತಪಡಿಸಿದ್ದಾರೆ. ಅಂತಹದರಲ್ಲಿ ಬಹಳ ಪ್ರಮುಖರಾದವರು ಸ್ತ್ರೀವಾದಿ ಚಿಂತಕಿ ಮಧುಕೀಶ್ವರ್‌ರವರು. ಇವರು ಅಧ್ಯಯನ ಮತ್ತು ಚಳುವಳಿಯನ್ನು ಒಟ್ಟೊಟ್ಟಿಗೆ ನೋಡಲು ಪ್ರಯತ್ನಿಸಿದರು. ಈ ಮೂಲಕ ಮಹಿಳಾ ವಿಷಯಗಳಿಗೆ ಅದರಲ್ಲೂ ವರದಕ್ಷಿಣೆಗೆ ಹೊಸ ದೃಷ್ಟಿಕೋನವನ್ನು ತಂದುಕೊಟ್ಟಿದ್ದಾರೆ.

ಭಾರತೀಯ ಮಹಿಳಾ ವಿವಾಹ ಸಮಸ್ಯೆಗಳಲ್ಲಿ ಪ್ರಮುಖವಾದುದು ವರದಕ್ಷಿಣೆ. ಈ ಸಮಸ್ಯೆಯ ವಿರುದ್ಧ ಚಳುವಳಿಗಳಲ್ಲಿ ಅನೇಕ ವರ್ಷಗಳಿಂದ ಖ್ಯಾತ ಸ್ತ್ರೀವಾದಿ ಚಿಂತಕಿ ಮಧುಕೀಶ್ವರ್ ಅವರು ಭಾಗವಹಿಸಿದ್ದಾರೆ. ದಿನನಿತ್ಯದ ಒಡನಾಟದಲ್ಲಿ ಯಾರನ್ನೇ ಪ್ರಶ್ನಿಸಿದರೂ ವರದಕ್ಷಿಣೆ ಒಂದು ಅನಿಷ್ಟ ಎಂದು ಒಪ್ಪಿಕೊಳ್ಳುತ್ತಾರೆ. ಆದರೆ ಪ್ರತಿಯೊಬ್ಬರೂ ವರದಕ್ಷಿಣೆ ಕೊಡುತ್ತಾರೆ ಮತ್ತು ತೆಗೆದುಕೊಳ್ಳುತ್ತಾರೆ. ಇದು ವಾಸ್ತವಾಂಶ ಎಂಬ ಅಭಿಪ್ರಾಯಪಟ್ಟು ಈ ಹಿನ್ನೆಲೆಯಿಂದ ವರದಕ್ಷಿಣೆ ಸಮಸ್ಯೆ ಪ್ರಶ್ನೆಯನ್ನು ಮರು ಪರಿಶೀಲಿಸುವ ಅಗತ್ಯತೆ ಇದೆ ಎಂದು ಹೇಳುತ್ತಾರೆ.

ಈ ತರಹದ ನಿಲುವಿಗೆ ಬರಲು ಅವರು ಹಲವು ಕಾರಣಗಳನ್ನು ನೀಡುತ್ತಾರೆ. "ಅದೇನೆಂದರೆ ಯಾರ ಒಳಿತಿಗಾಗಿ ನಾವು ವರದಕ್ಷಿಣೆಯನ್ನು ನಿರ್ನಾಮಗೊಳಿಸಲು ಇಷ್ಟ ಪಡುತ್ತೇವೋ, ಆ ಯುವತಿಯರಲ್ಲೇ ಹಲವರು ಅದನ್ನು ತಿರಸ್ಕರಿಸಲು ಸಿದ್ಧರಿಲ್ಲ. ಇದು ಒಂದು ರಾಜಕೀಯ ಮತ್ತು ನೈತಿಕ ಪ್ರಶ್ನೆಯನ್ನು ಎತ್ತುತ್ತವೆ. ಅದೇನೆಂದರೆ ನಮ್ಮಂತಹ ಸ್ವಯಂ ನಿಯಮಿತ ಸಾಮಾಜಿಕ ಪರಿವರ್ತನಕಾರರಿಗೆ ಜನರನ್ನು ಯಾವುದೇ ವಿಷಯದಲ್ಲಿ ಬಲವಂತಿಸುವ ಹಕ್ಕಿದೆಯೋ?" (ಸಂ.ಮೀರಾ. ಎಲ್.ಜಿ.:೧೯೯೭: ಪು.೭೨) ಯಾವ ಬದಲಾವಣೆಯನ್ನು

ತರುವುದರ ಪರವಾಗಿ ಹೋರಾಡುವ ಹಕ್ಕು ನಮಗಿದೆಯೋ? ಎನ್ನುವ ಪ್ರಶ್ನೆಗಳನ್ನು ಹಾಕಿಕೊಳ್ಳುತ್ತಾರೆ.

"ಯುವತಿಯರು ವರದಕ್ಷಿಣೆಯನ್ನು ತಿರಸ್ಕರಿಸದೇ ಇರುವುದನ್ನು 'ಅರಿವಿನ ಕೊರತೆ', 'ಕಡಿಮೆ ಮಟ್ಟದ ಪ್ರಜ್ಞೆ' ಎಂಬ ಉತ್ತರಗಳಿಗೆ ಈ ಪ್ರಶ್ನೆಯನ್ನು ತಳ್ಳಿ ಹಾಕಿಬಿಟ್ಟರೆ ಸಾಲದು. ಅವರು ಹೀಗೇಕೆ ಮಾಡುತ್ತಾರೆ ಎಂಬುದು ಗಂಭೀರವಾಗಿ ಪರಿಶೀಲಿಸಬೇಕು ಎಂದು ಸ್ತ್ರೀವಾದಿ ಚಿಂತಕರು ಹೇಳುತ್ತಾರೆ. ಈಗಿರುವ ಕುಟುಂಬ ವ್ಯವಸ್ಥೆಯಲ್ಲಿ, ವರದಕ್ಷಿಣೆಯನ್ನು ಬಿಟ್ಟುಕೊಡುವುದರಿಂದ ಹೆಂಗಸಿಗೆ ಯಾವುದೇ ಪರ್ಯಾಯ ಸೌಲಭ್ಯ ಸಿಗುವುದಿಲ್ಲ. ಅಂದರೆ ತನಗೆ ಸಿಗಬಹುದಾದ ಅಲ್ಪಸ್ವಲ್ಪ ಲಾಭವನ್ನು ನಿರಾಕರಿಸಿ ಕೈ ಖಾಲಿಯಾಗುವ ಪರಿಸ್ಥಿತಿಗೆ ತಮ್ಮನ್ನು ತಾವೇ ತಂದುಕೊಳ್ಳುವ ಹಾಗಾಗುತ್ತದೆ. ಅನೇಕ ಹೆಂಗಸರ ಮಟ್ಟಿಗೆ ವರದಕ್ಷಿಣೆ ಅನ್ನುವುದು ತಮ್ಮ ತಂದೆ ಮನೆಯ ಆಸ್ತಿಯಲ್ಲಿ ತಮಗೆ ಸಿಗಬಹುದಾದ ಒಂದೇ ಒಂದು ಪಾಲು ಆಗಿದೆ. ಹೆಂಗಸರಿಗೆ ಪಿತ್ರಾರ್ಜಿತ ಹಕ್ಕುಗಳು ಅನ್ನುವುದು ಕಾಗದದ ಮೇಲೆ ಮಾತ್ರ. ಪ್ರಸ್ತುತ ಪರಿಸ್ಥಿತಿಯಲ್ಲಿ ಯಾವುದಾರೂ ಸಂಪತ್ತಿನ ಮೇಲೆ ಅವರು ಹಕ್ಕು ಸ್ಥಾಪಿಸಬಹುದಾದರೆ ಅದು ವರದಕ್ಷಿಣೆ ಮಾತ್ರ. 'ವರದಕ್ಷಿಣೆಯನ್ನು ನಿರಾಕರಿಸಿ ನಿಮ್ಮ ಗಂಡನ ಮನೆಗೆ ಬರಿಗೈಯಲ್ಲಿ ಹೋಗಿ' ಎಂದು ಹೆಂಗಸರಿಗೆ ಸಲಹೆ ಕೊಡುವುದೆಂದರೆ, ಸಮಾಜ ಅವರನ್ನು ಸಾಯಿಸುವುದಕ್ಕಿಂತ ಹೆಚ್ಚು ಹುತಾತ್ಮರನ್ನಾಗಿ ತಾವೇ ಮಾಡಿಕೊಳ್ಳಲು ಸಲಹೆ ಕೊಟ್ಟಂತಾಯಿತು ಎಂದು ಸಮಾಜಸೇವಕರನ್ನು, ಚಳುವಳಿಗಾರರಿಗೆ ತರಾಟೆಗೆ ತೆಗೆದುಕೊಳ್ಳುತ್ತಾರೆ. ಹೆಣ್ಣು ಮಕ್ಕಳಿಗೆ ಸಮಾನ ಪಿತ್ರಾರ್ಜಿತ ಹಕ್ಕನ್ನು ನಾವು ನೀಡುವವರೆಗೆ ವರದಕ್ಷಿಣೆಯಿಂದ ಅವರಿಗೆ ಸಿಗಬಹುದಾದ ಅಲ್ಪ ಸ್ವಲ್ಪ ಪರಿಹಾರವನ್ನು ತ್ಯಾಗ ಮಾಡಲು ಹೇಳುವ ಹಕ್ಕು ನಮಗಿಲ್ಲ" (ಸಂ. ಮೀರಾ. ಎಲ್.ಜಿ:೧೯೯೭;ಪು.೭೩) ಎಂಬ ಪ್ರಶ್ನೆ ಹಾಕುತ್ತಾರೆ.

ಈ ಕುರಿತು ಅವರು ಪರಿಶೀಲಿಸುವ ಸಂಗತಿಗಳಲ್ಲಿ ಬಹಳ ಮುಖ್ಯವಾದದ್ದು 'ಆದರ್ಶವಾದಿ' ಹೆಂಗಸರು ವರದಕ್ಷಿಣೆಯ ಮೇಲೆ ತಮ್ಮ ಹಕ್ಕನ್ನು ನಿರಾಕರಿಸುವುದರಿಂದ ಉಂಟಾಗುವ ಸಂಭವಿತ ಅಪಾಯಗಳನ್ನು ಮಧುಕೀಶ್ವರರು ಉದಾಹರಣೆ ಮೂಲಕ ವಿಶ್ಲೇಷಿಸುತ್ತಾರೆ. ಸಮಾಜದಲ್ಲಿ ನಾವು ಗಮನಿಸಿದಂತೆ ವರದಕ್ಷಿಣೆಯ ಮೇಲೆ ಹೆಣ್ಣಿಗಿರುವ ಹಕ್ಕನ್ನು ಸಮಾಜ ಗುರುತಿಸುತ್ತದೆ. "ಆದರೆ ಅವಳಿಗೆ ಪಿತ್ರಾರ್ಜಿತ ಮೇಲಿರುವ ಹಕ್ಕನ್ನು ಅದು ಗುರುತಿಸುವುದಿಲ್ಲ. ನನ್ನ ಸಹೋದ್ಯೋಗಿಯೊಬ್ಬರ ಉದಾಹರಣೆಯನ್ನು ತೆಗೆದುಕೊಳ್ಳಿ. ಅವರು ಅವಿವಾಹಿತೆ, ಅವರ ಕುಟುಂಬದಲ್ಲಿ ವೃತ್ತಿಯೊಂದನ್ನು ಹಿಡಿದು ಸ್ವಂತ ಜೀವನವನ್ನು ರೂಪಿಸಿಕೊಂಡ ಏಕೈಕ ಮಹಿಳೆ ಇವರು. ಒಡವೆಗಳನ್ನು ಧರಿಸುವುದು ತನಗಿಷ್ಟವಿಲ್ಲ ಎಂಬ

ಕಾರಣಕ್ಕಾಗಿ ತನ್ನ ತಾಯಿಯ ಆಭರಣಗಳಲ್ಲಿ ಕೂಡ ಇವರು ಪಾಲು ಪಡೆಯಲಿಲ್ಲ. ಆದಾಗ್ಯೂ ಅವರಿಗೆ ವರದಕ್ಷಿಣೆ ಅಥವಾ ಅದಕ್ಕೆ ಸಮಾನವಾದದ್ದೇನು ಸಿಗಲಿಲ್ಲ. ಇದೆಲ್ಲದರ ಫಲ ಅಂದರೆ ಅವರ ಸಹೋದರನಿಗೆ ಪಿತ್ರಾರ್ಜಿತ ಮನೆ ಮತ್ತು ವ್ಯಾಪಾರ ದಕ್ಕಿದ್ದು ಮತ್ತು ಅವನ ಹೆಣ್ಣು ಮಕ್ಕಳಿಗೆ ಮದುವೆಯಲ್ಲಿ ದೊಡ್ಡ ಮೊತ್ತದ ವರದಕ್ಷಿಣೆ ಕೊಟ್ಟಿದ್ದು. (ವರದಕ್ಷಿಣೆಯಲ್ಲಿ ಕೊಟ್ಟ ವಸ್ತುಗಳಲ್ಲಿ ಹೆಚ್ಚಿನವನ್ನು ಆ ಹೆಣ್ಣುಮಕ್ಕಳು ಆಯ್ದದ್ದು) ನನ್ನ ಸಹೋದ್ಯೋಗಿ ಯಾವ ಆಧಾರ, ಪ್ರೋತ್ಸಾಹ ಇಲ್ಲದೆ, ಒಂದೊಂದು ರೂಪಾಯಿಯನ್ನು ತಾನೇ ಗಳಿಸಬೇಕಾಯಿತು. ಇಷ್ಟಾಗಿ ನಿವೃತ್ತಿಯ ನಂತರ ತಾನು ಯಾರ ಮನೆಯಲ್ಲಿ ಬದುಕುವುದು ಎಂಬುದು ಅವರ ಮುಂದೆ ಬೃಹದಾಕಾರದ ಪ್ರಶ್ನೆ ಸವಾಲಾಗಿ ನಿಂತಿದೆ. ಅವರ ಕುಟುಂಬಕ್ಕೆ ಸೇರಿದ ಮನೆಯಲ್ಲಿ ಇವರು ಪಾಲು ಕೇಳುತ್ತಾರೆ ಎನ್ನುವ ನಿರೀಕ್ಷೆಯನ್ನು ಯಾರೂ ಹೊಂದಿಲ್ಲ. ಹಾಗೊಮ್ಮೆ ಕೇಳಿದರೂ ಕುಟುಂಬದಲ್ಲಿ ಬಿರುಕುಗಳಾಗಿ ಅದು ಒಡೆದು ಹೋಗುವ ಸಾಧ್ಯತೆ ಇದೆ. ಹೀಗಾಗಿ ಅವರು ಸಧ್ಯಕ್ಕೆ ತಮ್ಮ ಅಣ್ಣನ ಮಗನ ಮನೆಯಲ್ಲಿ ವಾಸಿಸುತ್ತಿದ್ದಾರೆ. ಆ ಮನೆ ಅಷ್ಟೇ ಭಾಗ ಅವರದೂ ಆಗಬೇಕಿತ್ತು ಎನ್ನುವ ಮಾತನ್ನು ಯಾರು ಲೆಕ್ಕಕ್ಕಿಟ್ಟಿದ್ದಾರೆ" (ಸಂ.ಮೀರಾ.ಎಲ್.ಜಿ:೧೯೯೭; ಪು.೭೩,೭೪) ಈ ಮೂಲಕ ಆಕೆಯ ಬದುಕಿನ ಅತಂತ್ರವನ್ನು ಗುರುತಿಸುತ್ತಾರೆ.

ಕೆಲವು ಮಹಿಳೆಯ ತಂದೆತಾಯಿಗಳು ಮದುವೆಯಲ್ಲಿ ನೀಡಿದ ದೊಡ್ಡ ಮೊತ್ತದ ಹಣದ ಕುರಿತು ಮಧುಕೀಶ್ವರರು ಹೀಗೆ ವಿಶ್ಲೇಷಿಸುತ್ತಾರೆ. "ಮದುವೆಗಳಲ್ಲಿ ದೊಡ್ಡ ಮೊತ್ತ ವರದಕ್ಷಿಣೆ ಕೊಟ್ಟರೂ ಹೆಂಗಸರು ಅದನ್ನು ತನಗೆ ಬೇಕಾದಂತೆ ಖರ್ಚು ಮಾಡುವಂತಿಲ್ಲ, ಕೆಲವು ಸಲ ಹೆಂಗಸಿಗೆ ಈ ಸುಖ ಸಿಕ್ಕರೂ ಸಿಗಬಹುದು. ವರದಕ್ಷಿಣೆ ಇಲ್ಲದೆ ಗಂಡನ ಮನೆಗೆ ಹೋಗುವುದೆಂದರೆ ಈ ಸೌಭಾಗ್ಯವನ್ನು ಕಳೆದುಕೊಂಡಂತೆ. ಹೀಗಾಗಿ ಹೆಂಗಸರು ವರದಕ್ಷಿಣೆಯನ್ನು ಇಷ್ಟಪಡುತ್ತಾರೆ. ಹೆಣ್ಣುಮಕ್ಕಳ ಮಾತಿಗೆ ಬೆಲೆ ಸಿಗುವ ಮತ್ತು ಅವರಿಗೆ ಆದಷ್ಟು ವಸ್ತುಗಳು ದೊರೆಯುವ ಒಂದೇ ಒಂದು ಸಂದರ್ಭ ಅಂದರೆ ಮದುವೆ. ಈ ಸಂದರ್ಭ ಹೆಣ್ಣುಮಗಳಿಗೆ ಸ್ವಲ್ಪ ಮಟ್ಟಿಗಾದರೂ ತನಗೆ ಬೇಕಾದ ಉಡುಪುಗಳನ್ನು ಮತ್ತು ಆಭರಣಗಳನ್ನು ಆಯ್ದುಕೊಳ್ಳುವ ಅವಕಾಶ ಇರುತ್ತದೆ. ಹೆಚ್ಚಿನ ಹುಡುಗಿಯರಿಗೆ ಇದೊಂದು ಅಮೂಲ್ಯ ಅನುಭವ. ಏಕೆಂದರೆ ಸಾಮಾನ್ಯ ಮನೆಗಳಲ್ಲಿ ಮಗಳಿಗಿಂತ ಮಗನಿಗೇ ಹೆಚ್ಚು ಬೆಲೆ ಇದೆ" (ಸಂ.ಮೀರಾ.ಎಲ್.ಜಿ:೧೯೯೭;ಪು.೭೪) ಕುಟುಂಬದ ಈ ಸಾಂಸ್ಕೃತಿಕ ಮನೋಭಾವ ಮಹಿಳೆಯನ್ನು ಮುಂದೆ ಬದುಕಿನ ಗೊಂದಲಗಳ ಜೊತೆಗೆ ಅವಳಿಗೆ ಬಾಗಿಲಿಲ್ಲದೆ ಮನೆ ತರಹ ಅಸಹಾಯಕ ಸ್ಥಿತಿಯನ್ನು ತಂದು ಒಡ್ಡುತ್ತದೆ.

ಅಷ್ಟೇ ಅಲ್ಲದೆ, ಮದುವೆಯಾದ ನಂತರ ತನ್ನ ಅಗತ್ಯಗಳಿಗಾಗಿ ಖರ್ಚು ಮಾಡುವುದಕ್ಕೆ ಹಣ ಸಿಗುತ್ತದೆಯೋ ಇಲ್ಲವೋ ಎಂಬುದು ಅವಳಿಗೆ ಗೊತ್ತಿಲ್ಲ. ಒಂದಾದರೂ ಹೊಸ ಬಟ್ಟೆ ಅಥವಾ ಒಡವೆ ಸಿಗುತ್ತದೆ ಎಂಬುದು ಖಚಿತವಿಲ್ಲ. ಹೀಗಾಗುವುದರಿಂದ ಅನೇಕ ಸಂದರ್ಭಗಳಲ್ಲಿ ವರದಕ್ಷಿಣೆಯೇ ಹೆಂಗಸಿನ ಜೀವನಾಧಾರವಾಗಿ ಬಿಡುತ್ತದೆ. ಅದನ್ನು ತೆಗೆದುಕೊಳ್ಳಬೇಡಿ ಎಂದು ಉಪದೇಶಿಸುವುದು ಅವಳಿಗೆ ಕಷ್ಟವನ್ನೇ ತರುತ್ತದೆ. ಇದು ಹೇಗಿರುತ್ತದೆಂದರೆ "ಶೋಷಣೆಯನ್ನು ವಿರೋಧಿಸುವುದಕ್ಕಾಗಿ, ಸಂಬಳ ತೆಗೆದುಕೊಳ್ಳದೆ ಕೆಲಸ ಮಾಡಿ ಎಂದು ಗುಲಾಮರಿಗೆ ಉಪದೇಶಿಸಿದಂತಿರುತ್ತದೆ" (ಸಂ.ಮೀರಾ.ಎಲ್.ಜಿ:೧೯೯೭;ಪು.೭೪,೭೫) ಎಂದು ವಿಡಂಬನೆ ಮಾಡುತ್ತಾರೆ.

ವರದಕ್ಷಿಣೆ ಸಮಾಜದಲ್ಲಿ ಮಹಿಳೆಯ ಸ್ಥಾನ ಕೆಳಮಟ್ಟದಾಗಿದೆ ಎಂಬ ಅಭಿಪ್ರಾಯದ ಬಗೆಗೆ ಅವರು ಅನುಮಾನ ವ್ಯಕ್ತಪಡಿಸುತ್ತಾರೆ. ವರದಕ್ಷಿಣೆ ಅಂದರೇನು? ಮದುವೆಯ ಸಂದರ್ಭದಲ್ಲಿ ಸಂಪತ್ತಿನ ವರ್ಗಾವಣೆ ಅದರಷ್ಟಕ್ಕೆ ಅದರಲ್ಲಿ ಒಳ್ಳೆಯದೂ ಅಲ್ಲ ಕೆಟ್ಟದ್ದು ಅಲ್ಲ. ಬೇರೆ ಬೇರೆ ಸಮಾಜಗಳಲ್ಲಿ ಬೇರೆ ಬೇರೆ ರೀತಿಗಳಲ್ಲಿ ಮದುವೆಯ ಖರ್ಚನ್ನು ನಿರ್ವಹಿಸಲಾಗುತ್ತದೆ. ಆದರೆ ವರದಕ್ಷಿಣೆ ಇದು ಎಲ್ಲ ಸಮಾಜಗಳಲ್ಲಿಯೆ ಮಹಿಳೆಯರ ಸ್ಥಿತಿ ಕಡಿಮೆಗೊಂಡಿದೆ ಎಂಬುದರ ಸಾಕ್ಷಿ ಇಲ್ಲ. ಕೆಲವು ಸನ್ನಿವೇಶಗಳಲ್ಲಿ ಅದು ಅವಳ ಅಂತಸ್ತನ್ನು ಹೆಚ್ಚಿಸಿದ್ದು ಉಂಟು.

ವರದಕ್ಷಿಣೆಯ ಮೂಲಕ ಹೆಂಡತಿಯನ್ನು ಹಿಂಸಿಸುವುದು ಎನ್ನುವುದರ ಬಗೆಗೆ ಭಿನ್ನ ನಿಲುವನ್ನು ಮಧುಕೀಶ್ವರ್ ವ್ಯಕ್ತಪಡಿಸುತ್ತಾರೆ. ಅಂದರೆ ವರದಕ್ಷಿಣೆಗಾಗಿ "ಹೆಂಡತಿಯನ್ನು ಹಿಂಸಿಸುತ್ತೆ ಎನ್ನುವುದು ನಮ್ಮಲ್ಲಿ ವರದಕ್ಷಿಣೆಗಿಂತ ಹೆಚ್ಚಾಗಿ ನಮ್ಮ ಕುಟುಂಬ ವ್ಯವಸ್ಥೆಗೆ ಸಂಬಂಧಪಟ್ಟಿದೆ. ಏಕೆಂದರೆ ನಮ್ಮ ಕುಟುಂಬ ವ್ಯವಸ್ಥೆ ಹೆಂಗಸರನ್ನು ತೀರಾ ಅವಲಂಬಿತ ಮತ್ತು ಅಧೀನ ಸ್ಥಿತಿಗೆ ದೂಡುತ್ತದೆ. ಇಂತಹ ವ್ಯವಸ್ಥೆಯಲ್ಲಿ ಆರ್ಥಿಕ ನಿಯಂತ್ರಣ ಮತ್ತು ಪ್ರಮುಖ ನಿರ್ಧಾರಗಳನ್ನು ತೆಗೆದುಕೊಳ್ಳುವ ಅವಕಾಶ ಅನ್ನುವುದು ಗಂಡಸರ ಕೈಯಲ್ಲಿರುತ್ತದೆ. ನಾವು ನಿಜವಾಗಿ ಹೋರಾಡಬೇಕಾಗಿರುವುದು ವರದಕ್ಷಿಣೆಯಂಥ ತೋರಿಕೆಯ ಸಂಕೇತದ ಬಗ್ಗೆ ಅಲ್ಲ. ಬದಲಾಗಿ ಕುಟುಂಬದೊಳಗಡೆ ಇರುವ ಅಧಿಕಾರ ಸಂಬಂಧಗಳ ಬಗ್ಗೆ, ವರದಕ್ಷಿಣೆ ಕೊಡದಿದ್ದ ಮಾತ್ರಕ್ಕೆ ಆಸ್ತಿಯ ನಿಯಂತ್ರಣವು ಗಂಡಸರ ಕೈಯಲ್ಲಿದೆ ಮತ್ತು ಹೆಂಗಸರು ಅದರಿಂದ ವಂಚಿತರಾಗಿದ್ದಾರೆ ಎಂಬ ಸತ್ಯಾಂಶ ಬದಲಾಗಿ ಬಿಡುವುದಿಲ್ಲ" (ಸಂ.ಮೀರಾ.ಎಲ್.ಜಿ:೧೯೯೭; ಪು.೭೫) ಈ ಮೂಲಕ ಕುಟುಂಬ ಸಂಪನ್ಮೂಲದಲ್ಲಿನ ವಿಕೇಂದ್ರೀಕರಣ ತಾರತಮ್ಯದ ಬಗ್ಗೆ ತಮ್ಮ ಗಮನ ಹರಿಸುತ್ತಾರೆ.

ಸಾಮಾಜಿಕ ಮತ್ತು ರಾಜಕೀಯ ಕಾರ್ಯಕರ್ತರು ಸಾಮಾನ್ಯವಾಗಿ ಏನು ಮಾಡುತ್ತಾರೆಂದರೆ ವರದಕ್ಷಿಣೆಯೇ ಹೆಂಗಸರ ಶೋಷಣೆಗೆ ಮುಖ್ಯ ಕಾರಣ ಎಂದು ಹೇಳುವುದು ಮಹಿಳೆಯರನ್ನು ದಾರಿ ತಪ್ಪಿಸುವ ವ್ಯಾಪಾರ ಎಂದು ಹೇಳುತ್ತಾರೆ. ಈ ತರಹದ ಚಿಂತನೆ ಜನಪ್ರಿಯವಾಗಿಯೂ ಇದೆ. ಏಕೆಂದರೆ "ಕಡಿಮೆ ದುರಾಸೆ ಹೊಂದಿರಿ' ಎಂದು ಜನರಿಗೆ ಉಪದೇಶ ಮಾಡುವುದು ಸುಲಭ ನಮ್ಮ ನಮ್ಮ ಕುಟುಂಬದೊಳಗೆ ಅಧಿಕಾರ ಮತ್ತು ಆಸ್ತಿಯ ಮರುಹಂಚಿಕೆ ಆಗುವುದರ ಕಡೆ ನಮ್ಮ ಹೋರಾಟಗಳು ಗಮನ ಹರಿಸಬೇಕು" (ಸಂ.ಮೀರಾ.ಎಲ್.ಜಿ:೧೯೯೭;ಪು.೭೬) ಎಂದು ಹೇಳುತ್ತಾರೆ.

ವರದಕ್ಷಿಣೆ ಸಮಸ್ಯೆ ಎನ್ನುವುದು ಮಹಿಳೆಯರ ಮೂಲ ಅಸಹಾಯಕತೆಯೆನ್ನುವ ನಿರ್ಧಾರಕ್ಕೆ ಬರುತ್ತಾರೆ. "ಹೋರಾಟಗಾರರಲ್ಲಿ ಪ್ರಚಲಿತವಾಗಿರುವ ಇನ್ನೊಂದು ಅಭ್ಯಾಸ ಅಂದರೆ ಮದುವೆಗಳಲ್ಲಿನ ಆಡಂಬರವನ್ನು ಟೀಕಿಸುವುದು. ಈ ರೀತಿಯ ಆಡಂಬರದ ಮದುವೆಗಳು ಮತ್ತು ಉಡುಗೊರೆಯ ಪದ್ಧತಿ ಹೆಂಗಸರಿಗೆ ಅಹಿತವನ್ನುಂಟು ಮಾಡುತ್ತವೆ ಎಂಬುದು ಇವರ ಅಭಿಪ್ರಾಯ. ಇದು ಸರಿಯಾದ ತಿಳುವಳಿಕೆ ಅಲ್ಲ. ಆಡಂಬರದ ಟೀಕೆ ಬೇರೆ ಸ್ತ್ರೀಯರ ಹಿತಾಸಕ್ತಿಗಳನ್ನು ಕಾಯುವುದು ಬೇರೆ. ಈ ಎರಡರ ನಡುವೆ ಗೊಂದಲ ಮಾಡಿಕೊಳ್ಳಬಾರದು. ಆಡಂಬರವಾಗಿ ಮದುವೆ ಮಾಡಬೇಕು ಎನ್ನುವ ಒತ್ತಡ ಹೆಣ್ಣುಮಕ್ಕಳು ಮದುವೆಗಳಿಗೆ ಏಕೆ ಹಾಗೆ ನೋಡಿದರೆ ಮದುವೆ ಎಂಬ ಸಮಾರಂಭಕ್ಕೆ ಸೀಮಿತವಲ್ಲ. ಒಂದೇ ಒಂದು ಉದಾಹರಣೆಯನ್ನು ತೆಗೆದುಕೊಂಡು ನಗರದ ಮೇಲ್ವರ್ಗ ಮತ್ತು ಮಧ್ಯಮವರ್ಗಗಳಲ್ಲಿ ಈಗೀಗ ತುಂಬ ಆಡಂಬರವಾಗಿ ನಡೆಯುತ್ತಿರುವ ಹುಟ್ಟು ಹಬ್ಬಗಳು, ಮಕ್ಕಳ ಹುಟ್ಟು ಹಬ್ಬವನ್ನು ಆಡಂಬರವಾಗಿ ನಡೆಸುವ ಒತ್ತಡ ಈಗೀಗ ಹೆಚ್ಚುತ್ತಿದೆ. ಮದುವೆಗಳಿಗೆ ಹೋಲಿಸಿದರೆ ಹುಟ್ಟು ಹಬ್ಬಗಳ ಸಂಖ್ಯೆ ಹೆಚ್ಚು. ತಂದೆ ತಾಯಿಗಳು ಈ ಸಾಮಾಜಿಕ ಒತ್ತಡಕ್ಕೆ ಮಣಿಯುತ್ತಾರೆ. ಹಾಗೆಂದ ಮಾತ್ರಕ್ಕೆ ಅವರು ಇದರ ಬಗ್ಗೆ ಆಕ್ಷೇಪ ಮಾಡುವುದಿಲ್ಲ ಅಂತಲ್ಲ. ಗೊಣಗಿಕೊಂಡೇ ಈ ಸಮಾರಂಭಗಳನ್ನು ಮಾಡುತ್ತಿರುತ್ತಾರೆ. ಆದರೆ ಖಂಡಿತವಾಗಿಯೂ ಈ ಸಾಮಾಜಿಕ ಒತ್ತಡ ಅವರು ಮಕ್ಕಳನ್ನು ಶೋಷಿಸುವಂತೆ ಅಥವಾ ಕೊಲ್ಲುವಂತೆ ಪ್ರೇರೇಪಿಸುವುದಿಲ್ಲ. ಅಷ್ಟೇ ಅಲ್ಲ ಈ ಒತ್ತಡ ಮಕ್ಕಳನ್ನು ಪಡೆಯುವುದರಲ್ಲೂ ಒಂದು ತಡೆಯಾಗುವುದಿಲ್ಲ. ಆದುದರಿಂದ ವರದಕ್ಷಿಣೆ ಕೊಡಬೇಕಾದ ಮತ್ತು ಆಡಂಬರದಿಂದ ಮದುವೆ ಮಾಡಬೇಕಾದ ಭಯವೇ ಜನರು ಹೆಣ್ಣುಮಕ್ಕಳಿಗಿಂತ ಹೆಚ್ಚಾಗಿ ಗಂಡು ಮಕ್ಕಳನ್ನು ಬಯಸುವಂತೆ ಮಾಡುತ್ತದೆ ಎಂಬ ವಾದವನ್ನು ಕಣ್ಣುಮುಚ್ಚಿ ಒಪ್ಪಲಾಗುವುದಿಲ್ಲ. ಸಮಾಜ ಹೆಣ್ಣುಮಕ್ಕಳನ್ನು ನಿರ್ಲಕ್ಷಿಸುವುದಕ್ಕೆ ಇದೊಂದೇ ಕಾರಣವಲ್ಲ" (ಸಂ.ಮೀರಾ.ಎಲ್.ಜಿ:೧೯೯೭;ಪು.೭೬) ಎಂದು ಹೇಳುತ್ತಾರೆ.

ತಂದೆ ತಾಯಿಯರ ಮಟ್ಟಿಗೆ ವರದಕ್ಷಿಣೆಯ ಒತ್ತಾಯವೇ ಅತಿದೊಡ್ಡ ಸಮಸ್ಯೆ ಅನ್ನಿಸಲು ಒಂದು ಕಾರಣವಿದೆ. ಅದರಲ್ಲಿ ಹಲವು ಕಾರಣಗಳನ್ನು ಪರಿಶೀಲಿಸುತ್ತಾರೆ. ಈ ಮೂಲಕ ವಧುವಿನ ತಂದೆ ತಾಯಿ ಸಂಬಂಧಿಕರ ಒಳ ರಾಜಕೀಯಗಳನ್ನೇ ಬಯಲುಗೆಳೆಯುತ್ತಾರೆ. ಅದೇನೆಂದರೆ ವರದಕ್ಷಿಣೆ ಅನ್ನುವುದು ಅವರಿಗೆ ನೇರವಾಗಿ ಸಂಬಂಧಿಸಿದ ಸಂಗತಿ. ಆದರೆ ಇತರ ಚಿತ್ರ ಹಿಂಸೆಗಳಿಗೆ ಹೆಣ್ಣುಮಗಳು ಮಾತ್ರ ಅನುಭವಿಸುವುದಕ್ಕೆ ಅನೇಕ ಕಾರಣಗಳಿವೆ. ಅವುಗಳೆಂದರೆ ಅವಳು ನೋಡಲು ಚೆನ್ನಾಗಿಲ್ಲ ಎಂದು, ಅಡುಗೆ ಕೆಲಸ ಬರುವುದಿಲ್ಲ ಎಂದೋ, ನೆಂಟರಿಷ್ಟರ ಜೊತೆ ಸರಿಯಾಗಿ ವರ್ತಿಸುವುದಿಲ್ಲ ಎಂದೋ, ಗಂಡು ಮಗುವನ್ನು ಹೆರಲಿಲ್ಲ ಎಂದೋ ಅವಳನ್ನು ಅತ್ತೆ ಮನೆಯವರು ಆಡಿಕೊಂಡರೆ ಅಥವಾ ಗಂಡನನ್ನು ಅವಳು ಪ್ರಸನ್ನಗೊಳಿಸಲಿಲ್ಲ ಎಂದು ಅವಳ ಮೇಲೆ ದೂರುಗಳಿದ್ದರೆ ತಂದೆ ತಾಯಿಯರು ಏನು ಉತ್ತರ ಕೊಡುತ್ತಾರೆಂಬುದು ನಮಗೆಲ್ಲಾ ಗೊತ್ತು. ಇದು ಬದಲಾಗದ ಉತ್ತರ ಎಂದು ಹೆಣ್ಣುಮಕ್ಕಳು ಹೊಂದಿಕೊಂಡು ಹೋಗಬೇಕು. ಗಂಡನ ಮನೆಯವರಿಗೆ ಇಷ್ಟವಾಗುವಂತೆ ನಡೆದುಕೊಳ್ಳಬೇಕು ಎಂಬುದು. ಆದರೆ ವರದಕ್ಷಿಣೆಯ ಬಗ್ಗೆ ನಿಂದಿಸಿದಾಗ ಆ ಹೆಣ್ಣಿನ ತವರು ಮನೆ, ಅದರಲ್ಲೂ ಮನೆಯ ಗಂಡಸರಾದ ತಂದೆ ಅಣ್ಣ ಮುಂತಾದವರು ತರಾಟೆಗೆ ತೆಗೆದುಕೊಳ್ಳುತ್ತಾರೆ. ಈ ವಿಷಯದಲ್ಲಿ ಹೆಣ್ಣು ಎಷ್ಟು ಹೊಂದಿಕೊಂಡರೂ ನಡೆಯುವುದಿಲ್ಲ. ಗಂಡನ ಮನೆಯ ಒತ್ತಾಯಗಳನ್ನು ಹೆಣ್ಣಿನ ತಂದೆಯೇ ಪೂರೈಸಬೇಕಾಗಿರುವುದು. ಅದಕ್ಕಾಗಿಯೋ ಶೋಷಣೆಯ ಈ ರೂಪ ತವರು ಮನೆಯವರನ್ನು ತುಂಬಾಕಾಡುತ್ತದೆ ಮತ್ತು ಇನ್ನೆಲ್ಲ ವಿಷಯಗಳನ್ನು ಮರೆಯುವಂತೆ ಮಾಡುತ್ತದೆ.

ಹೆಣ್ಣಿನ ತಂದೆ ಅಥವಾ ಸಹೋದರ ಅಥವಾ ಕೊನೆಗೆ ಅವಳಾದರೂ ಅಷ್ಟೇ ವರದಕ್ಷಿಣೆಯ ಸಮಸ್ಯೆಗೆ ಪ್ರಾಮುಖ್ಯ ನೀಡಿ ಬೇರೆ ಸಮಸ್ಯೆಗಳನ್ನು ನಿರ್ಲಕ್ಷಿಸುವ ಒತ್ತಡದಲ್ಲಿರುತ್ತಾರೆ. ಏಕೆಂದರೆ ವರದಕ್ಷಿಣೆಯ ಶೋಷಣೆಯೊಂದನ್ನೇ ಪೋಲೀಸರೂ ಸೇರಿದಂತೆ ಎಲ್ಲರೂ ಪ್ರತಿಹೇಳದೆ ಒಪ್ಪಿಕೊಳ್ಳುವರು. ಹೆಂಡತಿಯನ್ನು ಹೊಡೆಯುವದೂ ಸೇರಿದಂತೆ ಇನ್ನುಳಿದ ಸಮಸ್ಯೆಗಳು ಅಷ್ಟು ಸಹಾನುಭೂತಿ ಪಡೆಯುವುದಿಲ್ಲ. ಗಂಡ ಹೆಂಡತಿಯನ್ನು ಹೊಡೆಯುತ್ತಾನೆ ಅಥವಾ ಕೀಳಾಗಿ ಕಾಣುತ್ತಾನೆ ಅಂದಾಗ ಅವನು ಹಾಗೇಕೆ ಮಾಡುತ್ತಾನೆ ಎಂದು ಕೇಳುತ್ತಾರೆ. ಅಂದರೆ ಅವನು ಸಿಟ್ಟಿಗೇಳುವಂತೆ ಇವಳೇನೋ ಮಾಡಿರಬಹುದು ಎಂಬುದು ಇಲ್ಲಿನ ಗ್ರಹೀತ. ವರದಕ್ಷಿಣೆ ತೆಗೆದುಕೊಳ್ಳುವುದು ಸರ್ವಥ ತಪ್ಪು ಎನ್ನುವ ವಿಷಯ ಸ್ವೀಕರಿಸಲ್ಪಟ್ಟಿರುವ ಗಂಡ ಹೆಂಡತಿಯನ್ನು ಯಾವುದೇ ಸಂದರ್ಭದಲ್ಲೂ ಹೊಡೆಯುವುದು ಎಂಬುದು ಇನ್ನೂ ಸ್ವೀಕರಿಸಲ್ಪಟ್ಟಿಲ್ಲ. ಹೀಗಾಗಿ ವರದಕ್ಷಿಣೆಯ ಒತ್ತಾಯಗಳ ಮೇಲೆಯೂ ಹೆಚ್ಚಿನ ಬೆಳಕು ಚೆಲ್ಲುವುದು.

ತಮ್ಮ ದೂರನ್ನು ಗಂಭೀರವಾಗಿ ತೆಗೆದುಕೊಳ್ಳುವಂತೆ ಮಾಡಲು ಅಥವಾ ಕ್ರಿಮಿನಲ್ ಮೊಕದ್ದಮ್ಮೆಯನ್ನು ದಾಖಲಿಸಲು ಸುಲಭವಾಗುತ್ತದೆ.

ಮಧುಕೀಶ್ವರ್‌ರವರು ಅಧ್ಯಯನದಲ್ಲಿ ಸೂಕ್ಷ್ಮವಾಗಿ ಒಂದು ಅಂಶವನ್ನು ಗುರುತಿಸುತ್ತಾರೆ. ಅದೇನೆಂದರೆ ಪ್ರಕರಣಗಳಲ್ಲಿ ಮತ್ತೆ ಮತ್ತೇ ಬರುವ ಸಮಸ್ಯೆ ಬರೇ ವರದಕ್ಷಿಣೆ ಅಲ್ಲ. "ಬೇರೆ ಅನೇಕ ಸಮಸ್ಯೆಗಳು ಪುನರಾವರ್ತಿತವಾಗುತ್ತಿರುತ್ತವೆ. ಒಂದು ಅವಳ ಕುಟುಂಬವನ್ನು ಹೀನಾಯವಾಗಿ ಬಯ್ಯುವುದು. ಇನ್ನೊಂದು ಅವಳ ಚಲನವಲನ, ಖರ್ಚು, ಅವಳಿಟ್ಟುಕೊಳ್ಳುವ ಸಂಬಂಧಗಳು ಈ ಮುಂತಾದುವನ್ನು ಕಟುವಾಗಿ ನಿರ್ಭಂಧಿಸುವುದು. ಈ ರೀತಿ ಇನ್ನೂ ಅನೇಕ ಸಮಸ್ಯೆಗಳನ್ನು ಗುರುತಿಸಬಹುದು. ಹೀಗಾಗಿ ವರದಕ್ಷಿಣೆ ಒಂದನ್ನೇ ಹೆಂಗಸರ ಶೋಷಣೆಯ ಮೂಲಕಾರಣ ಎಂದು ನೋಡುವುದು ಸರಿಯಲ್ಲ ಎಂದು ನನ್ನ ಗಮನಕ್ಕೆ ಬಂದಿದೆ. ನಾನು ಓದಿರುವ ಅಥವಾ ಕೇಳಿರುವ ನೂರಾರು ಕಥೆಗಳಲ್ಲಿ ಬೇರೆ ಎಲ್ಲ ವಿಷಯಗಳೆಲ್ಲ ತೃಪ್ತಿ ಹೊಂದಿದ್ದು ಕೇವಲ ವರದಕ್ಷಿಣೆಯ ಕಾರಣಕ್ಕಾಗಿ ಗಂಡ ಮತ್ತು ಅತ್ತೆ ಮೆನೆಯವರು ಹೆಂಡತಿಯನ್ನು ಪೀಡಿಸಿದ ಸಂದರ್ಭವನ್ನು ಕಂಡಿಲ್ಲ. ಹೆಂಡತಿಯನ್ನು ಪೀಡಿಸುವ ಸಂದರ್ಭಗಳಲ್ಲಿ ವರದಕ್ಷಿಣೆಯ ಗುಣ ಮತ್ತು ಪ್ರಮಾಣದ ಬಗ್ಗೆ ಮಾತ್ರ ಅತೃಪ್ತಿ ಇರುತ್ತದೆ ಎಂದು ತಿಳಿಯಲಾಗದು. ಆ ಹೆಂಗಸಿನ ಬಗೆಗೂ ಅಷ್ಟೇ ಅತೃಪ್ತಿ ಹೊಗೆಯಾಡುತ್ತಿರುತ್ತದೆ. ನಿನಗಿಂತ ಚೆನ್ನಾಗಿರುವವರು ಸಿಗುತ್ತಿದ್ದರು ಎಂದು ಅವಳನ್ನು ಟೀಕಿಸುವುದು, ಅವಳ ತವರನ್ನು ನಿಂದಿಸುವುದು ಇವೆಲ್ಲ ಅವಳ ಮೇಲಿನ ಅತೃಪ್ತಿಯನ್ನು ಕಾರಿಕೊಳ್ಳುವ ವಿಧಾನಗಳಾಗಿವೆ" (ಸಂ.ಮೀರಾ.ಎಲ್.ಜಿ:೧೯೯೭; ಪು.೭೯).

ಒಳ್ಳೆಯದಾಗಲಿ ಕೆಟ್ಟದಾಗಲಿ ಗಂಡನ ಮನೆಯವರು ಬಯಸಿದರೆ ಅದನ್ನು ನೆಪವಾಗಿಟ್ಟುಕೊಂಡು ಅವಳನ್ನು ಅವಮಾನ ಮಾಡಲು ಸಾಧ್ಯವಾಗದ ಯಾವ ವಿಷಯವೂ ಇಲ್ಲ. ನಿಜವಾಗಿ ನೋಡಿದರೆ ದುರಸ್ತಿಬೇಕಾಗಿರುವುದು ಅವಳ ಆಸ್ತಿಗೂ ಅಲ್ಲ ಗುಣಕ್ಕೂ ಅಲ್ಲ. ಅವಳು ಶೋಷಣೆ ಮತ್ತು ಹಿಂಸೆಯನ್ನು ಸಹಿಸುವಂತೆ ಮಾಡಿದವಲ್ಲ. ಆ ಅಸಹಾಯಕ ಸ್ಥಿತಿಗೆ ನಾವು ದುರಸ್ಥಿ ಮಾಡಬೇಕಾಗಿದೆ ಎಂದು ಹೇಳುತ್ತಾರೆ.

ನಿಜವಾದ ಸಮಸ್ಯೆ ಇರುವುದು ಹಣ, ಆಸ್ತಿಪಾಸ್ತಿಯಲ್ಲಿಲ್ಲ. ಬದಲಾಗಿ ಅವುಗಳನ್ನು ಯಾರು ನಿಯಂತ್ರಿಸುತ್ತಾರೆ ಎಂಬುದರಲ್ಲಿದೆ. ಅದು ಪೀಠೋಪಕರಣ, ಗೃಹೋಪಯೋಗಿ ವಸ್ತುಗಳು, ವಾಹನ, ಬಟ್ಟೆ, ಆಭರಣ ಯಾವುದೇ ವಸ್ತುವಾಗಿರಬಹುದು. ಎಷ್ಟೋ ದುಬಾರಿಯಾಗಿರಬಹುದು ಒಟ್ಟಿನಲ್ಲಿ ಇದರ ಮೇಲೆ ನಿಯಂತ್ರಣ ಯಾರಿಗಿದೆ ಎನ್ನುವುದೇ ಮುಖ್ಯ

ವಿಷಯ. ಇವತ್ತಿನ ನಮ್ಮ ಸಮಾಜದಲ್ಲಿ ಆಸ್ತಿ ಹಣಕಾಸನ್ನು ಹೆಣ್ಣು ನಿಯಂತ್ರಿಸಲೆಂದು ಯಾರೂ ಬಯಸುವುದಿಲ್ಲ. ಬದಲಾಗಿ ಇದರ ನಿಯಂತ್ರಣವನ್ನು ತನ್ನ ಸಹೋದರರಿಗೋ, ಗಂಡನಿಗೋ ಒಪ್ಪಿಸಬೇಕು ಎಂಬುದನ್ನೇ ಎಲ್ಲರೂ ಅಪೇಕ್ಷಿಸುತ್ತಾರೆ. ಹೆಂಡತಿ ಅನ್ನಿಸಿಕೊಂಡವಳು ತನ್ನ ಬದುಕು ಮತ್ತು ಸ್ವತ್ತುಗಳನ್ನು ನಿಯಂತ್ರಿಸಬಲ್ಲ ವ್ಯಕ್ತಿಯಾಗಿ ಪರಿಗಣಿಸಲ್ಪಡುವುದಿಲ್ಲ. ವಾಸ್ತವದಲ್ಲಿ ಅವಳೇ ಒಂದು ಸ್ವತ್ತು ಅನೇಕ ಕೆಲಸಗಳನ್ನು ಮಾಡಬೇಕಾಗಿರುವ ವಸ್ತು ಈ ಕೆಲಸಗಳಲ್ಲಿ ಆಸ್ತಿ ಹಣಕಾಸು ತರುವುದೂ ಒಂದು. ಇದಕ್ಕೂ ಮನೆಕೆಲಸ ಮಾಡುವುದಕ್ಕೂ, ಒಬ್ಬ ಗಂಡುಮಗನನ್ನು ಹೆತ್ತುಕೊಡುವುದಕ್ಕೋ ಅಂಥ ಭಾವಿಸುತ್ತಾರೆ.

ಗಂಡ ಮತ್ತು ಅವರ ಕುಟುಂಬದ ಮೇಲೆ ಅವಲಂಬಿತಳಾಗಿರುವ ಕಾರಣಕ್ಕಾಗಿ ಅಸಹಾಯಕಳಾಗಿರುವ ಹುಡುಗಿ ವರದಕ್ಷಿಣೆ ಕೊಡದಿರುವ ಮಾತ್ರಕ್ಕೆ ಕಡಿಮೆ ಅಸಹಾಯಕಳೇನೂ ಆಗುವುದಿಲ್ಲ. ಅವಳ ಒಳ್ಳೆಯ ಬಾಳು ಅನ್ನುವುದು ಒಂದು ಆಕಸ್ಮಿಕ ಅಷ್ಟೇ! ಏಕೆಂದರೆ ಅವಳ ಅತ್ತೆ ಮಾವಂದಿರು ತಮಗೆ ಸಹಜವಾಗಿ ದತ್ತವಾಗಿರುವ ಅಧಿಕಾರವನ್ನು ಚಲಾಯಿಸಿದಷ್ಟು ಒಳ್ಳೆಯವರಾಗಿದ್ದಾಗ ಮಾತ್ರ ಅವಳಿಗೆ ಉತ್ತಮ ಜೀವನ ಸಿಗುವುದು ಅಂದರೆ ಉತ್ಪ್ರೇಕ್ಷೆಯಲ್ಲ. ಅವಳ ಜೀವನದ ಮೇಲಿನ ಅಧಿಕಾರ ಅವಳ ಗಂಡ ಅತ್ತೆ, ಮಾವಂದಿರ ಕೈಯಲ್ಲಿರುತ್ತದೆ ಎನ್ನುವುದು ವಾಸ್ತವ ಸಂಗತಿ. ವರದಕ್ಷಿಣೆ ಕೊಡಲಿ, ಕೊಡದಿರಲಿ ಅವರು ಅವಳನ್ನು ಚೆನ್ನಾಗಿ ಬಾಳಿಸಬೇಕು ಎಂದು ನಿರ್ಧರಿಸಿದರೆ ಬಾಳಿಸುತ್ತಾರೆ. ಇಲ್ಲದಿದ್ದರೆ ಇಲ್ಲ. ಕ್ರೂರವಾಗಿರಬೇಕೆಂದು ಅವರು ನಿರ್ಧರಿಸಿದರೆ ಮುಗಿಯಿತು. ವರದಕ್ಷಿಣೆ ಕೊಡುವುದು ಅಥವಾ ಕೊಡದಿರುವುದು ಈ ವಿಷಯದಲ್ಲಿ ಯಾವ ವ್ಯತ್ಯಾಸವನ್ನು ಮಾಡುವುದಿಲ್ಲ ಎಂದು ಹೇಳುತ್ತಾರೆ.

ಹಾಗೊಂದು ವೇಳೆ ಒಬ್ಬ ಹೆಂಗಸು ತನ್ನ ಜೀವನವನ್ನು ತಾನೇ ನಿಯಂತ್ರಿಸುವ ಶಕ್ತಿ ಪಡೆದಿದ್ದಲ್ಲಿ ವರದಕ್ಷಿಣೆಯನ್ನು ಪಡೆಯುವುದರಿಂದ ಅವಳಿಗೆ ನಷ್ಟವೇನೂ ಆಗುವುದಿಲ್ಲ. ಅತ್ತೆ ಮನೆಯವರು ಕೀಳಾಗಿ ನಡೆಸಿಕೊಂಡರೆ ಹೇಗೆ ಪ್ರತಿಭಟಿಸಬೇಕು ಎಂದು ಅವಳಿಗೆ ಗೊತ್ತಿರುತ್ತದೆ. ತನ್ನ ಹಿತಾಸಕ್ತಿಗಳನ್ನು ಅವಳು ಕಾಯ್ದುಕೊಳ್ಳಬಲ್ಲಳು. ತೀರಾ ಅವಶ್ಯಕತೆ ಬಂದರೆ ತನ್ನ ವರದಕ್ಷಿಣೆಯ ಮೊತ್ತವನ್ನು ಹಿಂತೆಗೆದುಕೊಂಡು ಹೊರನಡೆಯಬಲ್ಲಳು. ಈ ಸಂದರ್ಭದಲ್ಲೇ "ನಮ್ಮ ಸುಪ್ರೀಮ್‌ಕೋರ್ಟ್ ವರದಕ್ಷಿಣೆಯನ್ನು 'ಸ್ತ್ರೀಧನ' ಎಂದು ಕರೆದಿರುವುದು ಮುಖ್ಯವಾಗುತ್ತದೆ. ಹೆಸರು ಬದಲಾಯಿಸುವುದರಿಂದ ಸಾಮಾಜಿಕ ಅನಿಷ್ಟವೊಂದು ಇಲ್ಲವಾಗಿ ಬಿಡುವುದಿಲ್ಲ. ಆದರೆ ಇಲ್ಲಿ ನ್ಯಾಯಾಲಯದ ಹೇಳಿಕೆಯಲ್ಲಿನ ಯಾವ ಅಂಶ ಮುಖ್ಯ ಅಂದರೆ ಸ್ವತ್ತಿನ ನಿಯಂತ್ರಣದ ಪಲ್ಲಟ ಹೆಂಗಸರಿಗೆ ಲಾಭ ಉಂಟುಮಾಡುತ್ತದೆ ಎಂಬ ಅಂಶ 'ಸ್ತ್ರೀಧನ' ಎಂದು ಹೇಳುವಾಗ ಆ ಧನದ ಮೇಲೆ 'ಸ್ತ್ರೀ'ಗೆ ನಿಯಂತ್ರಣ ಇದೆ ಎಂದು ಔಪಚಾರಿಕವಾಗಿಯಾದರೂ ಒಪ್ಪದಂತಾಯಿತು" (ಸಂ.ಟೀರಾ.ಎಲ್.ಜಿ:೧೯೯೭:ಪು.೮೩.೮೩).

ಮಧುಕೀಶ್ವರ್ ಇವತ್ತು ವರವಕ್ಷಿಣೆಯನ್ನು ನಿಷೇಧಿಸುವ ಬಗ್ಗೆ ಮಾತನಾಡುವುದು ಅಪ್ರಸ್ತುತ ಎಂದು ಭಾವಿಸಿ, ಈಗ ನಾವು ಒಮ್ಮನಸ್ಸಿನಿಂದ ಮಾಡಬೇಕಾದ ಕಾರ್ಯದ ಕಡೆ ಗಮನ ಹರಿಸುತ್ತಾರೆ. ಅದೇನೆಂದರೆ "ಹೆಂಗಸರಿಗೆ ಪೂರ್ವಾರ್ಜಿತ ಆಸ್ತಿಯಲ್ಲಿ ನಿಜವಾಗಿಯೂ ಹಕ್ಕು ಸಿಗುವಂತೆ ನಾವು ಹೋರಾಟ ನಡೆಸಬೇಕು ಎಂದು ಹೇಳುತ್ತಾರೆ. ಈಗಾಗಲೇ ಕಾಗದದ ಮೇಲೆ ಮಹಿಳೆಯರಿಗೆ ಆಸ್ತಿ ಹಕ್ಕು ಸಿಕ್ಕಿದರೂ ವಾಸ್ತವದಲ್ಲಿ ಈ ಹಕ್ಕು ಅವರಿಗೆ ಇನ್ನೂ ಸಿಕ್ಕಿಲ್ಲ ಎಂಬುದನ್ನು ನಾವು ಗಮನಿಸಬೇಕು. ವರದಕ್ಷಿಣೆ ತೆಗೆದುಕೊಳ್ಳಬೇಡಿ ವರದಕ್ಷಿಣೆ ಕೊಡಬೇಡಿ ಎಂಬ ಘೋಷಣೆಯನ್ನು ಮರೆತು ಹೆಣ್ಣು ಮಕ್ಕಳಿಗೆ ಆಸ್ತಿ ಹಕ್ಕು ಕೊಡಿ. ಹೆಣ್ಣು ಮಕ್ಕಳೇ ನಿಮ್ಮ ಆಸ್ತಿಯನ್ನು ಪಡೆದುಕೊಳ್ಳಿ ಎಂಬ ಘೋಷಣೆ ಎತ್ತಬೇಕು" (ಸಂ.ಮೀರಾ.ಎಲ್.ಜಿ:೧೯೯೭;ಪು.೮೩) ಎಂದು ಒತ್ತಾಯಿಸುತ್ತಾರೆ.

**ಈ ಕ್ರಮ ಜಾರಿಗೆ ಬರಬೇಕಾದರೆ ನಾವಿಡಬೇಕಾದ ಹೆಜ್ಜೆಗಳನ್ನು ಗುರುತಿಸುತ್ತಾರೆ. ಅವುಗಳೆಂದರೆ:-**

೧. "ಹೆಣ್ಣುಮಕ್ಕಳಿಗೆ ಆಸ್ತಿಯ ಪಾಲು ಕೊಟ್ಟಿರದ ಮರಣಪತ್ರ (ವ್ಹಿಲ್)ಕ್ಕೆ ಬೆಲೆ ಕೊಡಬಾರದು.

೨. ಆಸ್ತಿ ಮತ್ತು ಉತ್ತರಾಧಿಕಾರಕ್ಕೆ ಸಂಬಂಧಿಸಿದ ಎಲ್ಲ ಕಾನೂನುಗಳಲ್ಲೂ ತಿದ್ದುಪಡಿ ಆಗಬೇಕು. ಸ್ಥಿರಾಸ್ತಿಗಳಲ್ಲಿ ಹೆಂಗಸರಿಗೆ ಸಮಾನ ಹಕ್ಕು ಸಿಗುವಂತಾಗಬೇಕು.

೩. ಹೆಣ್ಣು ತನ್ನ ಸಹೋದರರು, ಗಂಡ ಅಥವಾ ಅತ್ತೆ ಮಾವಂದಿರಲ್ಲಿ ತನ್ನ ಎಲ್ಲ ಹಕ್ಕುಗಳನ್ನೊಪ್ಪಿಸಿ ಶರಣಾಗುವ ಯಾವ ದಾಖಲೆಯೂ ಪುರಸ್ಕೃತವಾಗಬಾರದು.

೪. ಹೆಂಗಸು ತನ್ನ ತವರು ಮನೆಯಿಂದ ಬಂದ ಪಿತ್ರಾರ್ಜಿತ ಆಸ್ತಿಯನ್ನು ತನ್ನ ಗಂಡ ಅಥವಾ ಅತ್ತೆ-ಮಾವಂದಿರ ಹೆಸರಿಗೆ ಬರೆಯಲು ಸಾಧ್ಯವಾಗದೆ ಹೋಗಬೇಕು. ಅವಳು ಮಕ್ಕಳಿಲ್ಲದೆ ಅಥವಾ ಸಂಶಯಾತ್ಮಕ ಸನ್ನಿವೇಶಗಳಲ್ಲಿ ಸತ್ತಾಗ ಅವಳ ಆಸ್ತಿಯನ್ನು ತವರು ಮನೆಗೆ ಹಿಂದಿರುಗಿಸಬೇಕು. ಹೀಗಾದಾಗ ಅವಳ ಗಂಡ ಮತ್ತು ಅತ್ತೆ ಮಾವಂದಿರಿಗೆ ಅವಳನ್ನು ಕೊಂದಾಗ, ಆಸ್ತಿ ಇನ್ನೊಂದು ವಿಶೇಷ ಲಾಭವಾಗುವುದು ತಪ್ಪುತ್ತದೆ. ಅವಳ ಪಿತ್ರಾರ್ಜಿತ ಆಸ್ತಿ ಏನಿದ್ದರೂ ಅವಳ ಪ್ರಬುದ್ಧ ಮಕ್ಕಳಿಗೆ ಹೋಗಬೇಕು. ಅಥವಾ ಅವಳಿಗೆ ಮಕ್ಕಳಿಲ್ಲದಿದ್ದರೆ ಮತ್ತು ಮದುವೆಯ ಅನೇಕ ವರ್ಷಗಳ ನಂತರ ಅವಳಿಗೆ ಸಹಜ ಸಾವು ಬಂದಾಗ ಅವಳ ಆಸ್ತಿ ಗಂಡನಿಗೆ ಸೇರಬೇಕು. (ಇಂಥದೇ ವಿರುದ್ಧ ಸಂದರ್ಭದಲ್ಲಿ ಗಂಡನ ಆಸ್ತಿ ಹೆಂಡತಿಗೆ ಸೇರುತ್ತದೆ)" (ಸಂ.ಮೀರಾ ಎಲ್.ಜಿ:೧೯೯೭;ಪು.೮೩,೮೪).

ಹೆಂಗಸರಿಗೆ ಪಿತ್ರಾರ್ಜಿತ ಆಸ್ತಿಯ ಮೇಲಿನ ಹಕ್ಕುಗಳು ನಿಜವಾಗಿಯೂ ಸಿಗುವುದಾದರೆ ವರದಕ್ಷಿಣೆ ಖಂಡಿತ ಮರೆಯಾಗಿ ಬಿಡುತ್ತದೆ. ಮಗನ ಅಥವಾ ಮಗಳ ಮದುವೆಯ ಸಂದರ್ಭದಲ್ಲಿ ಕೊಡುವ ಉಡುಗೊರೆಗಳು ವರದಕ್ಷಿಣೆ ಎಂದು ಕರೆಸಿಕೊಂಡರೂ ಸಹ ಆಗ ಆಕ್ಷೇಪಾರ್ಹವಾಗುವುದಿಲ್ಲ. ಸಮಾನ ಆಸ್ತಿಯ ಹಕ್ಕು ತರುವ ಇನ್ನೊಂದು ಭರವಸೆ ಅಂದರೆ ಮದುವೆಯಾದ ಹೆಣ್ಣುಮಗಳು ಕೂಡಾ ಬರಿಗೈಯಲ್ಲಿ ಉಳಿಯುವುದಿಲ್ಲ ಎಂದು ಹೇಳುತ್ತಾರೆ.

ಮಹಿಳೆ ತಮ್ಮ ಹಿತಾಸಕ್ತಿಗಳನ್ನು ಮತ್ತು ಜೀವನವನ್ನು ತಾವೇ ವ್ಯಾಖ್ಯಾನಿಸಿ ಕೊಳ್ಳುವಂತಾಗಬೇಕು. ಅಷ್ಟರಮಟ್ಟಿಗಿನ ನಿಯಂತ್ರಣವನ್ನು ಮತ್ತು ಶಕ್ತಿ ಸಾಮಾರ್ಥ್ಯಗಳನ್ನು ಅವರ ಪಡೆಯುವ ದಿಸೆಯಲ್ಲಿ ನಾವು ಹಲವರು ಹೋರಾಡಬೇಕು. ಆಗ ವರದಕ್ಷಿಣೆಯನ್ನು ಅವರು ಪಡೆದರೋ ಇಲ್ಲವೋ ಎಂಬ ವಿಷಯ ಅಪ್ರಸ್ತುತವಾಗಿ ಬಿಡುತ್ತದೆ.

**ಉಲ್ಲೇಖ:-**

೧. ಸಂ.ಮೀರಾ.ಎಲ್.ಜಿ:೧೯೯೭;ಮಾನುಷಿ ಮಾತು, ಅಕ್ಷರ ಪ್ರಕಾಶನ, ಶಿರೂರು.

ಇದುವರೆಗಿನ ಅಧ್ಯಯನವನ್ನು ಅನುಲಕ್ಷಿಸಿದಾಗ ವರದಕ್ಷಿಣೆ ನೋಡುವ ದೃಷ್ಟಿಯಲ್ಲಿಯೇ ಸಮಸ್ಯೆಯಿದೆ ಎಂಬುದು ಸ್ಪಷ್ಟವಾಗುತ್ತದೆ. ಪ್ರಸ್ತುತ ಅಧ್ಯಯನವು ಈ ಸಮಸ್ಯೆಯನ್ನು ನೋಡಬೇಕಾದ ಭೂಮಿಕೆಯನ್ನು ರೂಪಿಸಲು ಪ್ರಯತ್ನಿಸಿದೆ. ಈ ಸಮಸ್ಯೆಯು ಪ್ರಾಚೀನ ಸಮಾಜದಲ್ಲಿನ ತೆರ, ಕನ್ಯಾಶುಲ್ಕ, ವಧುದಕ್ಷಿಣೆಗಿಂತ ಭಿನ್ನವಾದದ್ದು ಮತ್ತು ಇದಕ್ಕೆ ವಿರುದ್ಧವಾದದ್ದು. ತೆರ, ಕನ್ಯಾಶುಲ್ಕಗಳು ತಳಸಮುದಾಯ–ದುಡಿಯುವ ವರ್ಗಗಳಲ್ಲಿ ಬಳಕೆಯಲ್ಲಿದ್ದವು. ವಧುದಕ್ಷಿಣೆ ಎನ್ನುವಂತಹದ್ದು ಮೇಲ್ವರ್ಗ, ಮಧ್ಯಮವರ್ಗಗಳಲ್ಲಿ ಬಳಕೆಯಲ್ಲಿದ್ದು ಇವುಗಳು ವಿವಾಹ ಸಂದರ್ಭಕ್ಕೆ ಮಾತ್ರ ಸೀಮಿತವಾಗಿದ್ದವು.

ತೆರ, ಕನ್ಯಾಶುಲ್ಕದ ಹೆಸರಲ್ಲಿ ನೀಡುವ ಪ್ರಾಣಿಗಳು, ಹಸು, ಎಮ್ಮೆ, ಕಾಳು, ಜೋಳ, ಇತ್ಯಾದಿಗಳು ಅನುಭೋಗದ ವಸ್ತುಗಳಾಗಿದ್ದವು ವಿನಃ ಹೆಣ್ಣಿನ ಕುಟುಂಬದವರ ಆಸ್ತಿಯಾಗುವಂತಹ ವಸ್ತುಗಳು ಆಗಿರಲಿಲ್ಲ. ಅಂದರೆ ಅವುಗಳು ಮೌಲ್ಯಯುತ ವಸ್ತುಗಳಾಗಿರಲಿಲ್ಲ ಎಂದು ಹೇಳಬಹುದು. ವಧುದಕ್ಷಿಣೆ ಹೆಸರಲ್ಲಿ ನೀಡುವ ದಾಸಿಯರು, ಆಸ್ಥಾನಗಳು, ಕುದುರೆಗಳು, ಸೈನಿಕರು, ಇತ್ಯಾದಿಗಳು ಪ್ರೀತಿಪೂರ್ವಕವಾಗಿ ಕೊಡುವ ಉಡುಗೊರೆಗಳಾಗಿದ್ದವು ಎಂದು ಹೇಳಬಹುದು.

ವಸಾಹತು ಕಾಲಘಟ್ಟದಲ್ಲಿ ಅಸ್ತಿತ್ವ ಪಡೆದ ವರದಕ್ಷಿಣೆ ಇಂದು ವಿವಾಹ ಸಂದರ್ಭದಲ್ಲಿ ವರನಿಗೆ ಕೊಡಲೇಬೇಕಾದ ಅನಿವಾರ್ಯ 'ದಕ್ಷಿಣೆ' ಉಡುಗೊರೆ ಆಗಿದೆ. ಅಷ್ಟೆ ಅಲ್ಲದೆ ವಿವಾಹದ ನಂತರವು ತನ್ನ ವರದಕ್ಷಿಣೆಯ ಚಿನ್ನ, ಬೆಳ್ಳಿ, ದಿನ ಬಳಕೆ ವಸ್ತುಗಳು, ಬೈಕು, ಟಿವಿ, ಫ್ರಿಜ್, ಕಾರು, ವಾಷಿಂಗ್‌ಮಿಷನ್, ನಿವೇಶನ ಆಸ್ತಿಸಂಗ್ರಹ ರೂಪದಲ್ಲಿ ಮುಂದುವರೆಯುತ್ತದೆ. ಇಂತಹ ಮುಂದುವರೆಯುತ್ತಿರುವ ಬೇಡಿಕೆಗಳನ್ನು, ಸ್ವರೂಪವನ್ನು ಅನೇಕ ಸಂಗತಿಗಳು ನಿರ್ಧರಿಸುತ್ತವೆ. ಅದರಲ್ಲಿ ಪ್ರಮುಖವಾದವುಗಳು ಉನ್ನತ ಹುದ್ದೆ, ಸರಕಾರಿ ನೌಕರರು, ಇಂಜಿನೀಯರ್, ವೈದ್ಯರು, ವಾಣಿಜ್ಯ ಆಡಳಿತಾಧಿಕಾರಿಗಳು, ಕೆಳದರ್ಜೆ ಸರಕಾರಿ ನೌಕರರು ನಿರ್ಧರಿಸುವ ಸ್ವರೂಪ ಒಂದು ಕಡೆಯಾದರೆ, ಹುಡುಗಿಯ ವರ್ಗ, ವರ್ಣ, ಜಾತಿ, ವಯಸ್ಸು, ಶಿಕ್ಷಣ, ದೈಹಿಕ, ಮಾನಸಿಕ, ಸ್ಥಿತಿಗಳು ನಿರ್ವಹಿಸುವ ವರದಕ್ಷಿಣೆ ಸ್ವರೂಪ ಮತ್ತೊಂದು ಕಡೆ. ಒಟ್ಟಿನಲ್ಲಿ ತೆರ, ಕನ್ಯಾಶುಲ್ಕ, ವಧುದಕ್ಷಿಣೆಯಿಂದ ಪಲ್ಲಟಗೊಂಡ ವರದಕ್ಷಿಣೆ 'ವ್ಯಾಪಾರ'ವಾಗಿದೆ. ಅದರಲ್ಲಿ ಮಹಿಳೆ ಮಾರಾಟದ 'ಸರಕು' ಆಗಿದ್ದಾಳೆ. ವಿವಾಹ 'ಮಾರುಕಟ್ಟೆ' ಆಗಿದೆ ಎಂದು ಹೇಳಬಹುದು.

ವರದಕ್ಷಿಣೆ ಮಾರುಕಟ್ಟೆಯನ್ನು ಹತೋಟಿಯಲ್ಲಿರಿಸುವ ಉದ್ದೇಶದಿಂದ ಬಂದಂತಹ ಕಾನೂನುಗಳು, ತನ್ನ ಉದ್ದೇಶವನ್ನು ಸಾಧಿಸುವಲ್ಲಿ ವಿಫಲವಾಗುವುದನ್ನು ನೋಡಿದರೆ, ಈ ಕಾನೂನಿನಿಂದ ಏನು ಉಪಯೋಗವಿಲ್ಲ ಅಂತ ಹೇಳಲಾಗುವುದಿಲ್ಲ. ಬದಲಿಗೆ ಈ ಕಾನೂನಿಗೆ ಮಿತಿಗಳಿವೆ ಎಂಬುದು ಸ್ಪಷ್ಟವಾಗುತ್ತದೆ. ಅಷ್ಟೆಲ್ಲ ಕಾನೂನು ರಚನೆಯ ಹಂತದಲ್ಲಿ ಮಹಿಳೆಯ ಸಹಭಾಗಿತ್ವ ಇಲ್ಲದ ಕೊರತೆಯು ಕಂಡುಬರುತ್ತದೆ.

ವರದಕ್ಷಿಣೆ ಕಾನೂನುಗಳ ಹಿನ್ನಲೆಯಿಂದ ವರದಕ್ಷಿಣೆ ಪ್ರಕರಣಗಳನ್ನು ಗಮನಿಸುವಾಗ ಮಹಿಳೆಯರ ಇತರ ಸಮಸ್ಯೆಗಳು ವರದಕ್ಷಿಣೆ ಸಮಸ್ಯೆಯಾಗಿ ಪರಿವರ್ತನೆ ಅಗಿವೆ ಎಂದು ಹೇಳಬಹುದು. ಪ್ರಕರಣಗಳ–೧, ಪ್ರಕರಣ –೨, ಪ್ರಕರಣ –೬ರಲ್ಲಿ ವರದಕ್ಷಿಣೆ ಕಿರುಕುಳಕ್ಕೆ ಹೆಂಡತಿ ಲೈಂಗಿಕ ಬಗೆಗಿನ ಸಂಶಯ, ಅವಳು ಸುಂದರವಾಗಿಲ್ಲ ಕಪ್ಪು ಆಗಿದ್ದಾಳೆ ಎಂದು ಹಾಗೂ ಅವಳ ಕೆಲಸಕ್ಕೆ ಗಂಡನ ಅನುಮತಿ ಪಡೆಯದೆ ಹೋಗುವುದು ಮುಖ್ಯವಾದ ಕಾರಣಗಳಾಗಿದೆ. ಇನ್ನೂ ಪ್ರಕರಣ –೩, ಪ್ರಕರಣ–೪ ನ್ನು ಗಮಿನಿಸಿದಾಗ ಶಿಕ್ಷಿತ, ಶಿಕ್ಷಿತರಲ್ಲದ ಮಹಿಳೆಯು ಹೊರಗಡೆ ದುಡಿಮೆಗೆ ಹೋಗುತ್ತಿಲ್ಲ. ದುಡಿದರೂ ಆ 'ಸಂಪಾದನೆ'ಯನ್ನು ಗಂಡನಿಗೆ ತಂದು ನೀಡುತ್ತಿಲ್ಲ ಮತ್ತು ಮಹಿಳೆಯ ಮೇಲೆ ಪಿತೃಪ್ರದಾನ ಸಮಾಜ ಹೋರಿಸದ ಮನೆಯ ಕೆಲಸಗಳು ಅಂದರೆ ಆ ಕುಟುಂಬದವರನ್ನು ಸರಿಯಾಗಿ ನೋಡಿಕೊಳ್ಳುವುದಿಲ್ಲ ಎಂಬ ಸಂಗತಿಗಳು ಮುಖ್ಯವಾಗಿವೆ. ಇನ್ನೂ ಪ್ರಕರಣ– ೭, ಪ್ರಕರಣ –೧೦, ಪ್ರಕರಣ –೧೨ರಲ್ಲಿ ಗಂಡುಮಗು ಇಲ್ಲ ಎಂಬುದು ಮುಖ್ಯವಾದ ಕಾರಣವಾಗಿದೆ. ಆದರೆ ಪ್ರಕರಣ –೮ ಮಾತ್ರ ವರದಕ್ಷಿಣೆ ಮುಖ್ಯಕಾರಣವಾಗಿರುವುದು ಕಂಡುಬರುತ್ತದೆ. ಈ ಹಿನ್ನೆಲೆಯಿಂದ ಮಹಿಳೆಯರ ಮೇಲೆ ಗಂಡ ಮತ್ತು ಆ ಕುಟುಂಬದ ಇತರ ಸದಸ್ಯರು ದೈಹಿಕ ಮತ್ತು ಮಾನಸಿಕವಾಗಿ ಹಿಂಸಿಸುತ್ತಾರೆ. ಆದರೆ ಈ ಪ್ರಕರಣಗಳು 'ವರದಕ್ಷಿಣೆ' ಕಾಯಿದೆಯಡಿಯಲ್ಲಿ ಕೇಸು ದಾಖಲಾಗಿದೆ. ಈ ಬಗೆಯ ಕೇಸು ದಾಖಲೆಯಿಂದ ಈ ಮಹಿಳೆಯರ ಸಮಸ್ಯೆ ಬಗೆಹರಿಸುವುದಿಲ್ಲ. ಅವಳಿಗೆ ಹಿಂಸೆಯು ತಪ್ಪುವುದಿಲ್ಲ ಹಾಗಾಗಿ, ಮಹಿಳೆಯರು ತಮಗಿರುವ ಸಮಸ್ಯೆಯನ್ನು ಗುರುತಿಸುವ ಕಾನೂನಿನಲ್ಲಿ ಕೇಸ್ ದಾಖಲಿಸುವ ಅಗತ್ಯತೆ ಇದೆ ಎಂಬುದು ಸ್ಪಷ್ಟ. ಮಹಿಳೆಯ ಸಮಸ್ಯೆಗಳು ಉಂಟು ಮಾಡಿರುವ ಪುರುಷನಿಷ್ಠ ಮೌಲ್ಯಗಳನ್ನು ಹೋಗಲಾಡಿಸಲು ಲಿಂಗ ಸಮಾನತೆ ಕಾನೂನುಗಳು ಇದ್ದರೆ ಸಾಲದು, ಈ ಕಾನೂನುಗಳನ್ನು ಜಾರಿಗೊಳಿಸಬೇಕಾದ ಅಗತ್ಯತೆ ಇದೆ. ಸಮಾಜವೇ ಲಿಂಗಸಮಾನತೆ ನೆಲೆಯಲ್ಲಿ ಕ್ರಿಯಾಶೀಲವಾಗಬೇಕಾಗುತ್ತದೆ. ಸ್ತ್ರೀವಾದಿ ಚಿಂತಕಿ ಮಧುಕೀಶ್ವರ್ ಈ ಹಿನ್ನೆಲೆಯ ಸಮಾಜ ಹೇಗೆ ಕಾರ್ಯಶೀಲವಾಗಬೇಕು ಎಂದು ಹೇಳುತ್ತಾರೆ.

ಸ್ತ್ರೀವಾದಿ ಚಿಂತಕಿ ಮಧುಕೀಶ್ವರ್‌ರವರು ಇವತ್ತು ವರದಕ್ಷಿಣೆಯನ್ನು ನಿಷೇಧಿಸುವ ಬಗ್ಗೆ ಮಾತನಾಡುವುದು ಅಪ್ರಸ್ತುತ ಎಂದು ಭಾವಿಸಿ ಈಗ ನಾವು ಒಮ್ಮನಸ್ಸಿನಿಂದ ಮಾಡಬೇಕಾದ ಕಾರ್ಯದ ಕಡೆ ಗಮನ ಹರಿಸುತ್ತಾರೆ. ಅದೇನೆಂದರೆ ಹೆಂಗಸರಿಗೆ ಪೂರ್ವಾರ್ಜಿತ ಆಸ್ತಿಯಲ್ಲಿ ನಿಜವಾಗಿಯೂ ಹಕ್ಕು ಸಿಗುವಂತೆ ನಾವು ಹೋರಾಟ ನಡೆಸಬೇಕು ಎಂದು ಹೇಳುತ್ತಾರೆ. ಈಗಾಗಲೇ ಕಾಗದದ ಮೇಲೆ ಮಹಿಳೆಯರಿಗೆ ಆಸ್ತಿಹಕ್ಕು ಸಿಕ್ಕಿದ್ದರೂ ವಾಸ್ತವದಲ್ಲಿ ಈ ಹಕ್ಕು ಅವರಿಗೆ ಇನ್ನೂ ಸಿಕ್ಕಿಲ್ಲ ಎಂಬುದನ್ನು ನಾವು ಗಮನಿಸಬೇಕು. ವರದಕ್ಷಿಣೆ ತೆಗೆದುಕೊಳ್ಳಬೇಡಿ, ವರದಕ್ಷಿಣೆ ಕೊಡಬೇಡಿ ಎಂದು ಘೋಷಣೆಯನ್ನು ಮರೆತು ಹೆಣ್ಣುಮಕ್ಕಳಿಗೆ ಆಸ್ತಿ ಹಕ್ಕು ಕೊಡಿ. ಹೆಣ್ಣು ಮಕ್ಕಳೇ ನಿಮ್ಮ ಆಸ್ತಿಯನ್ನು ಪಡೆದುಕೊಳ್ಳಿ ಎಂಬ ಘೋಷಣೆ ಎತ್ತಬೇಕು ಎಂದು ಹೇಳುವುದು ಈ ಅಧ್ಯಯನದ ಆಶಯವಾಗಿದೆ.

ಈ ಕ್ರಮ ಜಾರಿಗೆ ಬರಬೇಕಾದರೆ ನಾವಿಡಬೇಕಾದ ಹೆಜ್ಜೆ ಗುರುತಿಸುತ್ತಾರೆ. ಅವುಗಳೆಂದರೆ:-

೧. ಹೆಣ್ಣುಮಕ್ಕಳಿಗೆ ಆಸ್ತಿಯ ಪಾಲು ಕೊಟ್ಟರದ ಮರಣ ಪತ್ರ (ವ್ಹಿಲ್)ಕ್ಕೆ ಬೆಲೆ ಕೊಡಬಾರದು.
೨. ಆಸ್ತಿ ಮತ್ತು ಉತ್ತರಾಧಿಕಾರಕ್ಕೆ ಸಂಬಂಧಿಸಿದ ಎಲ್ಲ ಕಾನೂನುಗಳಲ್ಲೂ ತಿದ್ದುಪಡಿ ಆಗಬೇಕು. ಸ್ಥಿರಾಸ್ತಿಗಳಲ್ಲಿ ಹೆಂಗಸರಿಗೆ ಸಮಾನಹಕ್ಕು ಸಿಗುವಂತಾಗಬೇಕು.
೩. ಹೆಣ್ಣು ತನ್ನ ಸಹೋದರರು, ಗಂಡ ಅಥವಾ ಅತ್ತೆ ಮಾವಂದಿರಲ್ಲಿ ತನ್ನ ಎಲ್ಲ ಹಕ್ಕುಗಳನ್ನೊಪ್ಪಿಸಿ ಶರಣಾಗುವ ಯಾವ ದಾಖಲೆಯೂ ಪುರಸ್ಕೃತವಾಗಬಾರದು.
೪. ಹೆಂಗಸು ತನ್ನ ತವರು ಮನೆಯಿಂದ ಬಂದ ಪಿತ್ರಾರ್ಜಿತ ಆಸ್ತಿಯನ್ನು ತನ್ನ ಗಂಡ ಅಥವಾ ಅತ್ತೆ ಮಾವಂದಿರ ಹೆಸರಿಗೆ ಬರೆಯಲು ಸಾಧ್ಯವಾಗದೆ ಹೋಗಬೇಕು. ಅವಳು ಮಕ್ಕಳಿಲ್ಲದೆ ಅಥವಾ ಸಂಶಯಾತ್ಮಕ ಸನ್ನಿವೇಶಗಳಲ್ಲಿ ಸತ್ತಾಗ ಅವಳ ಆಸ್ತಿಯನ್ನು ತವರು ಮನೆಗೆ ಹಿಂದಿರುಗಿಸಬೇಕು. ಹೀಗಾದಾಗ ಅವಳ ಗಂಡ ಮತ್ತು ಅತ್ತೆ ಮಾವಂದಿರಿಗೆ ಅವಳನ್ನು ಕೊಂದಾಗ ಆಸ್ತಿ ಇನ್ನೊಂದು ವಿಶೇಷ ಲಾಭವಾಗುವುದು ತಪ್ಪುತ್ತದೆ. ಅವಳ ಪಿತ್ರಾರ್ಜಿತ ಆಸ್ತಿ ಏನಿದ್ದರೂ ಅವಳ ಪ್ರಬುದ್ಧ ಮಕ್ಕಳಿಗೆ ಹೋಗಬೇಕು. ಅಥವಾ ಅವಳಿಗೆ ಮಕ್ಕಳಿರದಿದ್ದರೆ ಮತ್ತು ಮದುವೆಯ ಅನೇಕ ವರ್ಷಗಳ ನಂತರ ಅವಳಿಗೆ ಸಹಜ ಸಾವು ಬಂದಾಗ ಅವಳ ಆಸ್ತಿ ಗಂಡನಿಗೆ ಸೇರಬೇಕು. (ಇಂಥದೇ ವಿರುದ್ಧ ಸಂದರ್ಭದಲ್ಲಿ ಗಂಡನ ಆಸ್ತಿ ಹೆಂಡತಿಗೆ ಸೇರುತ್ತದೆ).

ಹೆಂಗಸರಿಗೆ ಪಿತ್ರಾರ್ಜಿತ ಆಸ್ತಿಯ ಮೇಲಿನ ಹಕ್ಕುಗಳು ನಿಜವಾಗಿಯೂ ಸಿಗುವುದಾದರೆ ವರದಕ್ಷಿಣೆ ಖಂಡಿತ ಮರೆಯಾಗಿ ಬಿಡುತ್ತದೆ. ಮಗನ ಅಥವಾ ಮಗಳ ಮದುವೆಯ ಸಂದರ್ಭದಲ್ಲಿ ಕೊಡುವ ಉಡುಗೊರೆಗಳು ವರದಕ್ಷಿಣೆ ಎಂದು ಕರೆಸಿಕೊಂಡರೂ ಸಹ ಆಗ

ಆಕ್ಷೇಪಾರ್ಹವಾಗುವುದಿಲ್ಲ. ಸಮಾನ ಹಕ್ಕು ತರುವ ಇನ್ನೊಂದು ಭರವಸೆ ಅಂದರೆ ಮದುವೆಯಾಗದ ಹೆಣ್ಣುಮಗಳು ಕೂಡಾ ಬರಿಗೈಯಲ್ಲಿ ಉಳಿಯುವುದಿಲ್ಲ ಎಂದು ಹೇಳುತ್ತಾರೆ.

ಹೆಂಗಸರು ತಮ್ಮ ಹಿತಾಸಕ್ತಿಗಳನ್ನು ಮತ್ತು ಜೀವನವನ್ನು ತಾವೇ ವ್ಯಾಖ್ಯಾನಿಸಿ ಕೊಳ್ಳುವಂತಾಗಬೇಕು. ಅಷ್ಟರಮಟ್ಟಿಗಿನ ನಿಯಂತ್ರಣವನ್ನು ಮತ್ತು ಶಕ್ತಿ ಸಾಮರ್ಥ್ಯಗಳನ್ನು ಅವರು ಪಡೆಯುವ ದಿಸೆಯಲ್ಲಿ ನಾವು ಹೋರಾಡಬೇಕು. ಆಗ ವರದಕ್ಷಿಣೆಯನ್ನು ಅವರು ಪಡೆದರೋ ಇಲ್ಲವೋ ಎಂಬ ವಿಷಯ ಅಪ್ರಸ್ತುತವಾಗಿಬಿಡುತ್ತದೆ ಎಂದು ಹೇಳುತ್ತಾರೆ. ಇದರಿಂದ ವರದಕ್ಷಿಣೆಯ ಮೂಲ ಪರಿಹಾರ ಸಾಧ್ಯವೆಂದು ಪ್ರಸ್ತುತ ಈ ಅಧ್ಯಯನ ಭಾವಿಸುತ್ತದೆ.

# ಆಕರ ಗ್ರಂಥಗಳು


೧. ಇಂದಿರಾ ಆರ್, ೨೦೦೨, ಮಹಿಳೆ ಸಮಾಜ ಮತ್ತು ಸಂಸ್ಕೃತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೨. ಇಂದಿರಾ ಆರ್, ೨೦೦೦, ಮಹಿಳೆ ಮತ್ತು ಕೌಟುಂಬಿಕ ಹಿಂಸೆ, ಶ್ರೀ ರಾಜೇಂದ್ರ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್, ಮೈಸೂರು.

೩. ಇಂದಿರಾ ಹೆಗ್ಗಡೆ, ೨೦೦೪, ಬಂಟರು ಒಂದು ಸಮಾಜೋ-ಸಾಂಸ್ಕೃತಿಕ ಅಧ್ಯಯನ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೪. ಈಶ್ವರ ಎನ್.ಜೋಶಿ, ೧೯೮೩, ದಕ್ಷಿಣ ಕನ್ನಡದ ಕುಡುಬಿಯರು, ಐ.ಬಿ.ಎಚ್.ಪ್ರಕಾಶನ, ಬೆಂಗಳೂರು.

೫. ಉಷಾ ಎಂ, ೨೦೦೪, ಮಹಿಳಾ ಚಳುವಳಿ ಮತ್ತು ಮಹಿಳಾ ವಿಷಯಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೬. ಕಿಶೋರಿ ನಾಯಕ ಕೆ, ೧೯೯೯, ಸ್ತ್ರೀವಾದ ನೆಲೆಗಳು ಮತ್ತು ನಿಲುವುಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೭ ಗಾಯತ್ರಿ, ಎನ್, ೧೯೯೬, ಮಹಿಳೆ ಬಿಡುಗಡೆಯ ಹಾದಿಯಲ್ಲಿ, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೮. ಗಾಯತ್ರಿನಾವಡ, ೨೦೦೩, ಮಹಿಳಾ ಸಂಕಥನ, ಕರ್ನಾಟಕ ಸರ್ಕಾರ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು.

೯. ಗೀತಾಕೃಷ್ಣಮೂರ್ತಿ, ೨೦೦೭, ಮಹಿಳೆ ಸಮಾಜ ಕಾನೂನು, ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್, ಬೆಂಗಳೂರು.

೧೦. ಗೀತಾನಾಗಭೂಷಣ, ೧೯೯೩, ದುರಗ ಮುರಗಿಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೧. ಗೌಡ.ಟಿ.ಸಿ.ಎಸ್. ರಮೇಶ, ೨೦೦೪, ವಿಶೇಷ ಮತ್ತು ಸ್ಥಳೀಯ ಕಾನೂನುಗಳು, ಲಾಯರ್ಸ್ ಲಾ ಬುಕ್, ಬೆಂಗಳೂರು.

೧೨. ಗೌತಮ್ ಎಸ್.ಆರ್, ೨೦೦೨, ನಿತ್ಯ ಜೀವನದಲ್ಲಿ ಕಾನೂನು, ನವಕರ್ನಾಟಕ ಪ್ರಕಾಶನ, ಬೆಂಗಳೂರು.

೧೩. ಜಂಗಮ್, ೧೯೯೬, ಸಮಸ್ಯೆಗಳ ಸುಳಿಯಲ್ಲಿ ಸ್ವತಂತ್ರ ಭಾರತ, ಎಸ್.ವಿ.ಪಿ.ಪ್ರಕಾಶನ, ನಿಸರ್ಗ ಮಂಕಿ, ಉ.ಕ.

೧೪. ಚಂದ್ರು ಕಾಳೇನಹಳ್ಳಿ, ೧೯೯೩. ಸೋಲಿಗರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೧೫. ಚಂದ್ರಮತಿ ಸೋಂದಾ, ೨೦೦೪, ಚಿಪ್ಪೊಡದ ಮೌನ, ಅಭಿರುಚಿ ಪ್ರಕಾಶನ, ಮೈಸೂರು.

೧೬. ಚಂದ್ರಶೇಖರ ದಾಮ್ಲೆ, ೨೦೦೬. ಸಮಾಜಶಾಸ್ತ್ರ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೧೭. ಚಂದ್ರಶೇಖರಪ್ಪ ಟಿ.ಜಿ, ೨೦೦೫, ಸಮಗ್ರಭಾರತ ಇತಿಹಾಸ (ಆರಂಭದಿಂದ ೨೦೦೨ ರವರೆಗೆ) ಪೂರ್ಣ ಪ್ರಕಾಶನ, ಶಿವಮೊಗ್ಗ.

೧೮. ಚಂದ್ರಶೇಖರ. ಬಿ.ದಾಮ್ಲೆ, ೧೯೯೭, ಭಾರತೀಯ ಸಾಮಾಜಿಕ ಅಧ್ಯಯನ, ಜಗನ್ನಾಥ ಆಫ್‌ಸೆಟ್ ಪ್ರಿಂಟರ್ಸ್, ಬೆಂಗಳೂರು.

೧೯. ಜ್ಯೋತ್ಸ್ನಾ ಕಾಮತ್, ೧೯೯೯, ಮಹಿಳೆ–ಒಂದು ಅಧ್ಯಯನ, ನವಕರ್ನಾಟಕ ಪಬ್ಲಿಕೇಷನ್ಸ್, ಬೆಂಗಳೂರು.

೨೦. ಜ್ಯೋತ್ಸ್ನಾ ಕಾಮತ್, ೨೦೦೧, ಮಹಿಳೆ ಅಂದು–ಇಂದು, ಶ್ರೀ ಪ್ರೇಮಸಾಯಿ ಪ್ರಕಾಶನ, ಬೆಂಗಳೂರು.

೨೧. ನಂಜುಂಡ ಸ್ವಾಮಿ ಎಂ.ಎಸ್, ೨೦೦೪, ಕರ್ನಾಟಕ ಇತಿಹಾಸ ಮಾಲಿಕೆ ರಾಷ್ಟ್ರಕೂಟರ ಇತಿಹಾಸ, ಸಮಾಜ ಪುಸ್ತಕಾಲಯ, ಧಾರವಾಡ.

೨೨. ನಾಗರಾಜ ಅರಳಿ (ಸಂ), ೨೦೦೨, ಜನಸಾಮಾನ್ಯರಿಗಾಗಿ ಕಾನೂನು ಮಾಹಿತಿ, ಕರ್ನಾಟಕ ರಾಜ್ಯ ಕಾನೂನು ಸೇವೆಗಳ ಪ್ರಾಧಿಕಾರ, ಬೆಂಗಳೂರು.

೨೩. ನಾಗೇಶ ಎಚ್.ವಿ, ೧೯೯೩, ಮಹಿಳಾ ಅಧ್ಯಯನ, ಎಚ್.ವಿ.ನಾಗೇಶ ಸನ್ಮಾನ ಸಮಿತಿ, ಧಾರವಾಡ.

೨೪. ನಾರಾಯಣ ಎಂ, ೨೦೦೫, ಭಾರತೀಯ ಸಮಾಜದ ಬದಲಾವಣೆ, ಲಕ್ಷ್ಮೀ ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್, ಮೈಸೂರು.

೨೫. ನಾರಾಯಣ ಎಂ, ೨೦೦೪, ಭಾರತೀಯ ಸಮಾಜ ಪರಿಚಯ, ಲಕ್ಷ್ಮೀ ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್ ಹೌಸ್, ಮೈಸೂರು.

೨೬. ನಾರಾಯಣ ಎಂ, ಭಾರತೀಯ ಸಮಾಜ, ಲಕ್ಷ್ಮೀ ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್, ಮೈಸೂರು.

೨೭. ನಿರುಪಮಾ, ೧೯೭೯, ಕಾನೂನಿನ ಕಕ್ಷೆಯಲ್ಲಿ ರಕ್ಷೆ, ಆರತಿ ಪಬ್ಲಿಕೇಷನ್ಸ್ ಬೆಂಗಳೂರು.

೨೮. ನೀಲಮ್ಮ ಕತ್ನಳ್ಳಿ, ೧೯೯೭, ಮಹಿಳೆ ಹಲವು ಮುಖಗಳು, ಶ್ರೀ ರೇಣುಕಾ ಪ್ರಕಾಶನ, ಗುಲ್ಬರ್ಗಾ.

೨೯. ನೇಮಿಚಂದ್ರ, ೨೦೦೧, ಮಹಿಳಾ ಅಧ್ಯಯನ ಅಂಕಿತ ಪುಸ್ತಕ, ಬೆಂಗಳೂರು.

೩೦. ಪ್ರಭು ಕೆ.ಎಚ್, ೧೯೮೮, ಮದುವೆ ಕಾನೂನು, ಐ.ಬಿ.ಎಚ್. ಪ್ರಕಾಶನ ಬೆಂಗಳೂರು.

೩೧. ಪ್ರೀತಿ ಶುಭಚಂದ್ರ, ೨೦೦೨, ಮಹಿಳಾ ಅಧ್ಯಯನದ ತಾತ್ವಿಕ ನೆಲೆಗಳು ಮತ್ತು ಮಹಿಳಾ ಚಳುವಳಿಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೩೨. ಪೂರ್ವಾಚಾರ್.ಎಂ, ೨೦೦೦. ಭಾರತೀಯ ಸಮಾಜ ಮತ್ತು ಸಂಸ್ಕೃತಿ, ವಿಶ್ವಕರ್ಮ ಪ್ರಕಾಶನ, ಶಿವಮೊಗ್ಗ.

೩೩. ಪೂರ್ವಾಚಾರ್. ಎಂ, ಭಾರತೀಯ ಸಮಾಜ ಪರಿಚಯ, ಲಕ್ಷ್ಮೀ ಪ್ರಿಂಟಿಂಗ್ ಮತ್ತು ಪಬ್ಲಿಷಿಂಗ್, ಮೈಸೂರು.

೩೪. ಭಟ್ಟ ಜೆ.ಎಸ್, ೧೯೯೩, ಹಸಲರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.

೩೫. ಭೈರಪ್ಪ ಕೆ, ೧೯೯೬-೯೭, ಭಾರತೀಯ ಸಮಾಜ, ಕೇಂಬ್ರಿಡ್ಜ್ ಪಬ್ಲಿಷಿಂಗ್ ಕಂಪನಿ, ಬೆಂಗಳೂರು.

೩೬. ಭೈರಪ್ಪ ಕೆ, ೧೯೯೪, ಭಾರತೀಯ ಸಮಾಜ, ಪ್ರಕಾಶ ಸಾಹಿತ್ಯ, ಬೆಂಗಳೂರು.

೩೭ ಭೈರಪ್ಪ ಕೆ, ೧೯೯೬, ಭಾರತೀಯ ಸಮಾಜದ ಅಧ್ಯಯನ, ಕೇಂಬ್ರಿಡ್ಜ್ ಪಬ್ಲಿಷಿಂಗ್ ಕಂಪನಿ, ಬೆಂಗಳೂರು.

೩೮. ಮನೋಹರ ಕುಮಾರ್ ಸಿ. ಬಿ, ೧೯೯೭, ಭಾರತೀಯ ಸಮಾಜದ ಅಧ್ಯಯನ, ವಸುಧಾ ಎಂಟರ್ ಪ್ರೈಸಸ್, ಶಿವಮೊಗ್ಗ.

೩೯. ಮಹೇಶ ಹೆಚ್. ಲೋಬೋ, ೧೯೯೯, ಲಿಂಗಸೂಕ್ಷ್ಮತೆ ಮತ್ತು ನ್ಯಾಯ, ಇಲ್ಲಾ ಪ್ರಿಂಟರ್ಸ್ ಇಕ್ರಾ,

೪೦. ಮಾಲತಿ ಎ.ಪಿ, ೧೯೮೬-೧೯೮೯, ಮಹಿಳೆ-ಸಮಾಜ ಕಲ್ಯಾಣ, ಮನೋವಿಕಾಸ ಪುಸ್ತಕಮಾಲೆ ಮೈಸೂರು.

೪೧. ಮೀರಾ ಎಲ್.ಜೆ (ಅನು), ೧೯೯೭, ಮಾನುಷಿಯ ಮಾತು, ಅಕ್ಷರ ಪ್ರಕಾಶನ ಶಿರೂರು.

೪೨. ಮುಳಗುಂದ ಹೆಚ್.ವಿ, ನಾಗೇಶ. ಹೆಚ್.ವಿ. (ಸಂ), ೧೯೮೬, ಆಧುನಿಕ ಮಹಿಳೆ ಮತ್ತು ಸಮಾಜ, ಮಾತೋಶ್ರೀ ಪ್ರಕಾಶನ, ಮುದ್ದೇಬಿಹಾಳ.

೪೩. ಮೂರ್ತಿಶ್ವರಯ್ಯ, ೨೦೦೨, ಸಮಾಜ ಮತ್ತು ಕಾನೂನು, ಸಪ್ನ ಬುಕ್ ಹೌಸ್, ಬೆಂಗಳೂರು.

೪೪. ಮೂರ್ತಿಶ್ವರಯ್ಯ.ಪಿ.ಕಾ, ೨೦೦೦, ಮಹಿಳೆ ಸಮಾಜ ಮತ್ತು ಕಾನೂನು, ಸಪ್ನ ಬುಕ್ ಹೌಸ್, ಬೆಂಗಳೂರು.

೪೫. ರಾಜಶೇಖರ ಎಸ್, ೨೦೦೧, ಭಾರತೀಯ ಸಮಾಜ, ಭ್ರಮರ ಪ್ರಕಾಶನ, ಶಿವಮೊಗ್ಗ.

೪೬. ರಾಜಶೇಖರ ಎಸ್, ೨೦೦೦, ಸಾಮಾಜಿಕ ಸಮಸ್ಯೆಗಳು, ಭ್ರಮರ ಪ್ರಕಾಶನ, ಶಿವಮೊಗ್ಗ.

೪೭. ವಿವಿಧ ಲೇಖಕಿಯರು, ೧೯೯೩, ಚಿತ್ತ ವೃತ್ತ, ಸಂದೀಪ ಸಾಹಿತ್ಯ ಅತ್ರಾಡಿ, ಉಡುಪಿ.ದ.ಕ.

೪೮. ವಿಜಯಶ್ರೀ ಸಬರದ, ೨೦೦೫, ಮಹಿಳೆ ಶೋಷಣೆ ಸವಾಲುಗಳು, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೪೯. ವೆಂಕೋಬರಾವ್.ಡಿ, ೨೦೦೦, ನ್ಯಾಯಕ್ಕಾಗಿ ಮಹಿಳೆಯರ ಹೋರಾಟ, ದಿವ್ಯಚಂದ್ರ ಪ್ರಕಾಶನ, ಬೆಂಗಳೂರು.

೫೦. ಶ್ರೀನಿವಾಸ ಸಿರನೂರಕರ್, ೨೦೦೫, ವಿಜ್ಞಾನೇಶ್ವರ ಮಿತಾಕ್ಷರ, ಪ್ರಸಾರಾಂಗ, ಗುಲಬರ್ಗಾ ವಿಶ್ವವಿದ್ಯಾಲಯ, ಗುಲಬರ್ಗಾ.

೫೧. ಶ್ರೀಮತಿ ಎಚ್.ಎಸ್, ಚಹರೆ, ಇಳಾ ಮುದ್ರಣ ಬೆಂಗಳೂರು.

೫೨. ಶ್ರೀಮತಿ ಎಚ್.ಎಸ್, ಗೌರಿ ದುಃಖ, ಶಕ್ತಿ ಪ್ರಿಂಟರ್ಸ್ ಆಂಡ್ ಪಬ್ಲಿಷರ್ಸ್, ಬೆಂಗಳೂರು.

೫೩. ಶ್ರೀಮತಿ ಎಚ್.ಎಸ್, ೨೦೦೦, ಮಹಿಳಾ ಅಧ್ಯಯನ ದಕ್ಷಿಣಾಯನ ಸಂಚಿಕೆ, ಪ್ರಸಾರಾಂಗ, ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ವಿದ್ಯಾರಣ್ಯ

೫೪. ಶ್ರೀಮತಿ ಎಚ್.ಎಸ್, ೨೦೦೧, ಮಹಿಳಾ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೫೫. ಶ್ರೀಮತಿ ಎಚ್.ಎಸ್, ೧೯೯೯, ಮಹಿಳಾ ಅಧ್ಯಯನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೫೬. ಶೈಲಜ ಹಿರೇಮಠ, ೧೯೯೯, ಪಾತರದವರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.

೫೯. ಶೈಲಜ ಹಿರೇಮಠ, ೨೦೦೩, ಸ್ತ್ರೀಕಥನ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ.

೬೦. ಶೈಲಜ ಹಿರೇಮಠ (ಸಂ.), ೨೦೦೬, ಮಹಿಳಾ ಅಧ್ಯಯನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.

೬೧. ಸದಾಶಿವ ಕೆ, ೨೦೦೫, ಸಮಗ್ರಭಾರತ ಇತಿಹಾಸ, ಪ್ರಿಯದರ್ಶಿನಿ ಪ್ರಕಾಶನ, ಮೈಸೂರು.

೬೨. ಸಮತಾ.ಬಿ.ದೇಶಮಾನೆ, ೨೦೦೩, ಸಮಾಜಶಾಸ್ತ್ರ ಮತ್ತು ಮಹಿಳೆ, ಚೇತನ ಬುಕ್ ಹೌಸ್ ಮೈಸೂರು.

೬೩. ಸುಮಿತ್ರಾ ಬಾಯಿ.ಬಿ.ಎನ್. ಮತ್ತು ಗಾಯತ್ರಿ ಎನ್. (ಸಂ.), ೧೯೯೫, ಸ್ತ್ರೀವಾದಿ ಪ್ರವೇಶಿಕೆ, ಕರ್ನಾಟಕ ಲೇಖಕಿಯರ ಸಂಘ, ಬೆಂಗಳೂರು.

೬೪. ಹೇಮಲತಾ ಮಹಿಷಿ, ೧೯೯೯, ಇಪ್ಪತ್ತೊಂದನೆಯ ಶತಮಾನದತ್ತ ಮಹಿಳೆ, ಪ್ರಸಾರಾಂಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೬೫. ಹೇಮಲತಾ ಮಹಿಷಿ, ೨೦೦೪, ಸಬಲೆ ಸಲಹೆ, ಸಾಧನಾ ಪ್ರಕಾಶನ, ಬೆಂಗಳೂರು.

೬೬. ಹೇಮಲತಾ ಮಹಿಷಿ, ೧೯೯೫. ಮಹಿಳೆ ಮತ್ತು ಕಾನೂನು, ಕರ್ನಾಟಕ ಬುಕ್ ಏಜೆನ್ಸಿ, ಬೆಂಗಳೂರು.

೬೭. ಹೇಮಲತಾ ಎಚ್.ಎಂ. (ಅನು) (ಮೂಲ-ಮಧುಕೀಶ್ವರ್), ೧೯೯೯, ಭಾರತದ ಮಹಿಳೆಯರ ಬದುಕು ಮತ್ತು ಹೋರಾಟ, ಶ್ರೀ ಶಕ್ತಿ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

**ಇಂಗ್ಲೀಷ್ ಗ್ರಂಥಗಳು:**

೧. Edited-Martin Macleish, 1993-94, The common wealth Minister, Reference Book 1993/94, Published Kensington publications limited in conjunction with the common wealth lecreturiat .

೨. Gender and Law: 2005, Vivekananda Institute for Leadership development, Mysore.

೩. Towards Equality, 1974, Report of National committee on the Status of women in India, Govt. of India.

## ಮಾಸಿಕ ಮತ್ತು ದಿನ ಪತ್ರಿಕೆಗಳ ವಿವರ

| | | |
|---|---|---|
| ೧. | ಅಚಲ | ಮಾರ್ಚ್ ೨೦೦೨ |
| ೨. | ಉದಯವಾಣಿ | ೦೮-೦೫-೨೦೦೭ |
| ೩. | ಉದಯವಾಣಿ | ೧೬-೦೯-೨೦೦೬ |
| ೪. | ಕನ್ನಡಪ್ರಭ | ೦೬-೦೫-೨೦೦೭ |
| ೫. | ಕನ್ನಡ ಪ್ರಭ | ೧೫-೦೫-೨೦೦೭ |
| ೬. | ಕನ್ನಡ ಪ್ರಭ | ೨೬-೦೪-೨೦೦೭ |
| ೭. | ಕನ್ನಡಪ್ರಭ | ೨೧-೦೩-೨೦೦೭ |
| ೮. | ಕನ್ನಡಪ್ರಭ ಪುಟ – ೧೧ | ೦೫-೦೨-೨೦೦೭ |
| ೯. | ದಿಕ್ಸೂಚಿ | ಜುಲೈ ೨೦೦೩ |
| ೧೦. | ದಿಕ್ಸೂಚಿ | ಫೆಬ್ರವರಿ – ೨೦೦೫ |
| ೧೧. | ಪ್ರಿಯಾಂಕ | ಮಾರ್ಚ್ – ೨೦೦೪ |
| ೧೨. | ಪ್ರಜಾವಾಣಿ | ೨೩-೦೫-೨೦೦೭ |
| ೧೩. | ಪ್ರಜಾವಾಣಿ | ೨೨-೦೬-೨೦೦೭ |
| ೧೪. | ಪ್ರಜಾವಾಣಿ | ೧೮-೦೬-೨೦೦೭ |
| ೧೫. | ಪ್ರಜಾವಾಣಿ | ೦೬-೦೫-೨೦೦೭ |
| ೧೬. | ಪ್ರಜಾವಾಣಿ | ೦೬-೦೫-೨೦೦೭ |
| ೧೭ | ಪ್ರಜಾವಾಣಿ ಪುಟ – ೭ | ೩೦-೦೪-೨೦೦೭ |
| ೧೮. | ಪ್ರಜಾವಾಣಿ ಪುಟ – ೪ | ೧೬-೦೨-೨೦೦೭ |
| ೧೯. | ಪ್ರಜಾವಾಣಿ | ೦೬-೦೩-೨೦೦೭ |
| ೨೦. | ಪ್ರಜಾವಾಣಿ | ೦೨-೦೨-೨೦೦೭ |
| ೨೧. | ಪ್ರಜಾವಾಣಿ | ೧೨-೧೧-೨೦೦೭ |
| ೨೨. | ಪ್ರಜಾವಾಣಿ | ೧೫-೧೧-೨೦೦೭ |
| ೨೩. | ಪ್ರಜಾವಾಣಿ | ೨೩-೧೧-೨೦೦೭ |

| | | |
|---|---|---|
| ೨೪. | ಪ್ರಜಾವಾಣಿ | ೨೬-೧೨-೨೦೦೬ |
| ೨೫. | ಪ್ರಜಾವಾಣಿ | ೧೨-೦೩-೨೦೦೭ |
| ೨೬. | ಮಾನಸ | ಜನವರಿ ೨೦೦೦ |
| ೨೭. | ಮನೀಷಾ | ವಾರ್ಷಿಕ ಸಂಚಿಕೆ ೨೦೦೨-೦೩ |
| ೨೮. | ಮಾನಸ | ನವೆಂಬರ್ – ೨೦೦೦ |
| ೨೯. | ಮಾನಸ | ಜನವರಿ – ೧೯೯೭ |
| ೩೦. | ಮಾನಸ | ಜೂನ್ – ೨೦೦೨ |
| ೩೧. | ಮಾನಸ | ಸೆಪ್ಟಂಬರ್ – ೨೦೦೨ |
| ೩೨. | ವಿಜಯ ಕರ್ನಾಟಕ | ೨೭-೦೩-೨೦೦೭ |
| ೩೩. | ಸಂಯುಕ್ತ ಕರ್ನಾಟಕ | ೦೨-೧೧-೨೦೦೬ |
| ೩೪. | ಸುಧಾ | ನವಂಬರ್ ೩೦, ೨೦೦೬ |
| ೨೫. | ಹಾಯ್ ಬೆಂಗಳೂರು | ಏಪ್ರಿಲ್ – ೨೦೦೭ |
| ೩೬. | ಹಾಯ್ ಬೆಂಗಳೂರು | ಮೇ – ೨೦೦೭ |

# ವಕ್ತೃ ವಿವರ

| ಕ್ರ.ಸಂ. | ಹೆಸರು | ವಯಸ್ಸು | ಊರು | ಜಾತಿ |
|---|---|---|---|---|
| ೧. | ಅನ್ನಮ್ಮ | ೨೮ | ಹೊಸಳ್ಳಿ | ಕುರುಬರ |
| ೨. | ಆಶಾ | ೨೮ | ಜಂತಗಲ್ (ಗಂಗಾವತಿ) | ಬ್ರಾಹ್ಮಣ |
| ೩. | ಕನಕಮ್ಮ | ೨೯ | ಜುಲೈನಗರ (ಗಂಗಾವತಿ) | ಚಲವಾದಿ |
| ೪. | ಕನಕಾಂಬಿ | ೨೪ | ಜಂತಗಲ್ (ಗಂಗಾವತಿ) | ಉಪ್ಪಾರ |
| ೫. | ಕಮಲಾಕ್ಷಿ | ೩೨ | ಅಯ್ಯೋವಧ್ಯ | ಕುರುಬರ |
| ೬. | ಕರಿಬಸಮ್ಮ | ೩೦ | ಪ್ರಗತಿನಗರ | ಚಲುವಾದಿ |
| ೭. | ಕಾಳಮ್ಮ | ೩೦ | ಇಸ್ಲಾಂಪುರ (ಗಂಗಾವತಿ) | ಉಪ್ಪಾರ |
| ೮. | ಕೂವಮ್ಮ | ೩೨ | ಪ್ರಗತಿನಗರ | ಚಲುವಾದಿ |
| ೯. | ಗ್ಯಾರೆಮ್ಮ | ೩೦ | ಜಂತಗಲ್ (ಗಂಗಾವತಿ) | ಚಲವಾದಿ |
| ೧೦. | ಜಯಮ್ಮ | ೨೩ | ಪಂಪಾನಗರ (ಗಂಗಾವತಿ) | ಬೆಸ್ತರ |
| ೧೧. | ಜಯಮ್ಮ | ೩೦ | ರವಿನಗರ (ಕ್ಯಾಂಪು) (ಗಂಗಾವತಿ) | ಈಡಿಗರ್ |
| ೧೨. | ತ್ರಿವೇಣಿ | ೨೬ | ಅಯ್ಯೋವಧ್ಯ | ಬ್ರಾಹ್ಮಣ |
| ೧೩. | ದುರಗಮ್ಮ | ೨೫ | ಆಚಾರನರಸಾಪುರ | ಚಲುವಾದಿ |
| ೧೪. | ನಾಗಮ್ಮ | ೨೪ | ಅಯ್ಯೋವಧ್ಯ | ಬ್ರಾಹ್ಮಣ |
| ೧೫. | ನಿಂಗಮ್ಮ | ೩೫ | ಇಸ್ಲಾಂಪುರ (ಗಂಗಾವತಿ) | ಉಪ್ಪಾರ |
| ೧೬. | ನೀಲಮ್ಮ | ೨೪ | ಹೊಸಳ್ಳಿ | ಉಪ್ಪಾರ |
| ೧೭. | ಪಾರ್ವತಿ | ೨೨ | ಜಂಗಮರ ಕಲ್ಲುಡಿ | ನಾಯಕ |
| ೧೮. | ಪುಷ್ಪತಿ | ೩೨ | ಮರಳಿ | ನಾಯಕ |
| ೧೯. | ಪೂಜಾ | ೨೫ | ಜುಲೈನಗರ (ಗಂಗಾವತಿ) | ಬ್ರಾಹ್ಮಣ |
| ೨೦. | ಫಾತಿಮಾ | ೨೬ | ವಿಧ್ಯಾ ನಗರ | ಮುಸ್ಲಿಂ |
| ೨೧. | ಬಸಮ್ಮ | ೨೯ | ಪಂಪಾನಗರ (ಗಂಗಾವತಿ) | ನಾಯಕ |
| ೨೨. | ಬಸಲಿಂಗಮ್ಮ | ೨೨ | ಹೆರೂರು | ಈಡಿಗ |

| | | | | |
|---|---|---|---|---|
| ೨೩. | ಜೀಮಮ್ಮ | ೩೫ | ಜಂತಗಲ್ (ಗಂಗಾವತಿ) | ಉಪ್ಪಾರ |
| ೨೪. | ಮಂಜಮ್ಮ | ೨೬ | ಹೊಸಳ್ಳಿ | ಈಡಿಗರ |
| ೨೫. | ಮಾರೆಮ್ಮ | ೨೮ | ವಿದ್ಯಾನಗರ | ಕುರುಬರ |
| ೨೬. | ಮಾತಾಯಮ್ಮ | ೨೮ | ಇಸ್ಲಾಂಪುರ (ಗಂಗಾವತಿ) | ಕುರುಬರ |
| ೨೭. | ಯಂಕವ್ವ | ೩೦ | ಜಂಗಮರ ಕಲ್ಲುಡಿ | ನೇಕಾರ |
| ೨೮. | ರಾಧಾಮ್ಮ | ೨೩ | ಜುಲೈನಗರ (ಗಂಗಾವತಿ) | ಲಿಂಗಾಯತ |
| ೨೯. | ರೇಣುಕಮ್ಮ | ೨೪ | ಆಚಾರನರಸಾಪುರ | ಚಲುವಾದಿ |
| ೩೦. | ಲಕ್ಷ್ಮೀ | ೩೦ | ಇಸ್ಲಾಂಪುರ (ಗಂಗಾವತಿ ನಗರ) | ಕುಂಬಾರ |
| ೩೧. | ಲಕ್ಷ್ಮಿದೇವಿ | ೩೨ | ಜುಲೈನಗರ (ಗಂಗಾವತಿ) | ವಿಶ್ವಕರ್ಮ |
| ೩೨. | ವಿಶಾಲ | ೨೫ | ಜಂಗಮರ ಕಲ್ಲುಡಿ | ವಿಶ್ವಕರ್ಮ |
| ೩೩. | ವೆಂಕಟಲಕ್ಷ್ಮೀ | ೨೬ | ಜಂಗಮರ ಕಲ್ಲುಡಿ | ಲಿಂಗಾಯತ |
| ೩೪. | ಶಿವಗಂಗಮ್ಮ | ೩೦ | ಹೆರೂರು | ಚಲುವಾದಿ |
| ೩೫. | ಸುಲೀಲಾ | ೨೫ | ಹೆರೂರು | ಚಲುವಾದಿ |
| ೩೬. | ಸಂಗಮ್ಮ | ೨೮ | ಜಂಗಮರ ಕಲ್ಲುಡಿ | ಲಿಂಗಾಯತ |
| ೩೭. | ಸಂಗೀತಾ | ೨೯ | ಮರಳಿ | ಲಿಂಗಾಯತ |
| ೩೮. | ಸುಬ್ಬಾಲಕ್ಷ್ಮೀ | ೨೭ | ಜಂತಗಲ್ (ಗಂಗಾವತಿ) | ಆಂಧ್ರ ರೆಡ್ಡಿ |
| ೩೯. | ಸುಭದ್ರ | ೨೪ | ಜುಲೈನಗರ (ಗಂಗಾವತಿ) | ಲಿಂಗಾಯತ |
| ೪೦. | ಸರಸ್ವತೀಬಾಯಿ | ೩೦ | ಜುಲೈನಗರ (ಗಂಗಾವತಿ) | ಉಪ್ಪಾರ |

